# ಗೀತಾ ನಾಗಭೂಷಣರವರ ಕಾದಂಬರಿಗಳಲ್ಲಿ ಪ್ರತಿಭಟನಾತ್ಮಕ ನೆಲೆಗಳು

(ಹಸಿಮಾಂಸ ಮತ್ತು ಹದ್ದುಗಳು, ಆಸರೆಗಳು ಹಾಗೂ ಬದುಕು ಕೃತಿಗಳನ್ನು ಅನುಲಕ್ಷಿಸಿ)

ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸಿದ ನಿಬಂಧ

2009–2010


ಸಂಶೋಧನಾ ವಿದ್ಯಾರ್ಥಿ

ಸೌಮ್ಯ.ಡಿ.ಕೆ

ಮಾರ್ಗದರ್ಶಕರು

ಡಾ॥ ವಡ್ಡೆ ಹೇಮಲತಾ

ಕನ್ನಡ ಅಧ್ಯಾಪಕರು

ಕನ್ನಡ ಅಧ್ಯಯನ ಕೇಂದ್ರ

ಜ್ಞಾನಭಾರತಿ, ಬೆಂಗಳೂರು





ಕಾವ್ಯಮಂಡಲ

(ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದಿದೆ)

ನಂ.13/85, ರಾಷ್ಟ್ರೀಯ ವಿದ್ಯಾಲಯ ರಸ್ತೆ,

ಬಸವನಗುಡಿ, ಬೆಂಗಳೂರು–560004

# ಗೀತಾ ನಾಗಭೂಷಣರವರ ಕಾದಂಬರಿಗಳಲ್ಲಿ ಪ್ರತಿಭಟನಾತ್ಮಕ ನೆಲೆಗಳು

**(ಹಸಿಮಾಂಸ ಮತ್ತು ಹದ್ದುಗಳು, ಆಸರೆಗಳು ಹಾಗೂ ಬದುಕು ಕೃತಿಗಳನ್ನು ಅನುಲಕ್ಷಿಸಿ)**

**ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸಿದ ನಿಬಂಧ**

**2009–2010**

**ಸಂಶೋಧನಾ ವಿದ್ಯಾರ್ಥಿ**

**ಸೌಮ್ಯ.ಡಿ.ಕೆ.**

**ಮಾರ್ಗದರ್ಶಕರು**

**ಡಾ॥ ವಡ್ಡೆ ಹೇಮಲತಾ**

ಕನ್ನಡ ಅಧ್ಯಾಪಕರು

ಕನ್ನಡ ಅಧ್ಯಯನ ಕೇಂದ್ರ

ಜ್ಞಾನಭಾರತಿ, ಬೆಂಗಳೂರು



**ಕಾವ್ಯಮಂಡಲ**

(ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದಿದೆ)

ನಂ.13/85, ರಾಷ್ಟ್ರೀಯ ವಿದ್ಯಾಲಯ ರಸ್ತೆ,

ಬಸವನಗುಡಿ, ಬೆಂಗಳೂರು–560004

# ದೃಢೀಕರಣ ಪತ್ರ

**ಸೌಮ್ಯ.ಡಿ.ಕೆ** ಇವರು **"ಗೀತಾ ನಾಗಭೂಷಣರವರ ಕಾದಂಬರಿಗಳಲ್ಲಿ ಪ್ರತಿಭಟನಾತ್ಮಕ ನೆಲೆಗಳು"** ಎಂಬ ಶೀರ್ಷಿಕೆಯ ಈ ಎಂ.ಫಿಲ್ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸ್ವತಂತ್ರ ಅಧ್ಯಯನದ ಮೂಲಕ ಸಿದ್ಧಪಡಿಸಿರುತ್ತಾರೆ. ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಈ ಮೊದಲು ಬೇರೆ ಯಾವುದೇ ವಿಶ್ವವಿದ್ಯಾಲಯದ, ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

**ದಿನಾಂಕ :** 30/8/10

**ಸ್ಥಳ :** ಬೆಂಗಳೂರು.

[signature]

**ಮಾರ್ಗದರ್ಶಕರು**

**ಡಾ॥ ವಡ್ಡೆ ಹೇಮಲತಾ**

ಕನ್ನಡ ಅಧ್ಯಾಪಕರು

ಕನ್ನಡ ಅಧ್ಯಯನ ಕೇಂದ್ರ

ಜ್ಞಾನಭಾರತಿ, ಬೆಂಗಳೂರು

# ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ **"ಗೀತಾ ನಾಗಭೂಷಣರವರ ಕಾದಂಬರಿಗಳಲ್ಲಿ ಪ್ರತಿಭಟನಾತ್ಮಕ ನೆಲೆಗಳು"** ಎಂಬ ಶೀರ್ಷಿಕೆಯ ಈ ಎಂ.ಫಿಲ್ ನಿಬಂಧವನ್ನು **ಡಾ.ವಡ್ಡೆ ಹೇಮಲತಾ,** ಅಧ್ಯಾಪಕರು ಕನ್ನಡ ವಿಭಾಗ, ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ, ಜ್ಞಾನಭಾರತಿ, ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ನಿಬಂಧವನ್ನು ಈ ಮೊದಲು ಯಾವುದೇ ವಿಶ್ವವಿದ್ಯಾಲಯದ ಪದವಿ ಅಥವಾ ಇತರೆ ಉದ್ದೇಶಗಳಿಗಾಗಲಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**ದಿನಾಂಕ :** 30-8-10

**ಸ್ಥಳ : ಬೆಂಗಳೂರು**

**ಸಂಶೋಧನಾ ವಿದ್ಯಾರ್ಥಿನಿ**

ಡಿ.ಕೆ.ಸೌಮ್ಯ

**ಸೌಮ್ಯ.ಡಿ.ಕೆ**

# ಪರಿವಿಡಿ

## ಅಧ್ಯಾಯ-1

# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

ಕನ್ನಡದಲ್ಲಿ ಒಂದು ಶತಮಾನ ಕಾಲದ ಇತಿಹಾಸವಿರುವ ಕಾದಂಬರಿ ಎನ್ನುವ ಗದ್ಯ ಬರವಣಿಗೆ ಬದುಕಿನ ಸಮಗ್ರತೆಯ ಒಳನೋಟಗಳನ್ನು ಸೂಕ್ಷ್ಮವಾಗಿ ಅವಲೋಕಿಸುವ ಮತ್ತು ನಿರ್ವಹಿಸುವ ಕೆಲಸವನ್ನು ಮಾಡುತ್ತಲೇ ಬಂದಿವೆ. ಹಾಗಾಗಿ ಕಾದಂಬರಿಗಳು ಸಮಾಜ, ಸಂಸ್ಕೃತಿಯನ್ನು ಸಾಹಿತ್ಯದಲ್ಲಿ ಅನುಭವದ ಮೂಲಕ ವ್ಯಕ್ತಪಡಿಸುವಂತವೇ ಆಗಿವೆ. ಕನ್ನಡದಲ್ಲಿ ಕಥೆ, ಕಾದಂಬರಿ ಪ್ರಕಾರದ ಬರವಣಿಗೆಯಲ್ಲಿ ಪುರುಷನಷ್ಟೇ ಅಲ್ಲದೇ ಮಹಿಳೆಯರು ಸಹ ತಾವು ಕಂಡ, ತಮ್ಮ ಅನುಭವಗಳ ಮನೋಭೂಮಿಕೆಯನ್ನು ಕಟ್ಟುತ್ತಲೇ ಬಂದಿದ್ದಾರೆ. ಮಹಿಳೆ ಪುರುಷನಿಗಿಂತ ಭಿನ್ನವಾಗಿ ಬದುಕನ್ನು ಗ್ರಹಿಸುತ್ತಾಳೆ. ನಿರೀಕ್ಷೆ, ಹತಾಶೆ, ಹಂಬಲ, ಸುಖ-ದುಃಖಗಳು ಹೆಣ್ಣಿನವಾಗಿದ್ದು, ಆಕೆ ಸೃಷ್ಟಿಸಿದ ಕೃತಿಯಲ್ಲಿ ಹೆಣ್ಣಾಗಿ ಅವಳು ಬದುಕನ್ನು ಕಂಡುಂಡುದರ ಪಾತ್ರ ಇದ್ದೇ ಇರುತ್ತದೆ. ಉದಾಹರಣೆಗೆ ಹೆಸರಿಸಬಹುದಾದರೆ ತ್ರಿವೇಣಿ, ಎಂ.ಕೆ.ಇಂದಿರಾ, ಸಾಯಿಸುತೆ, ಅನುಪಮಾನಿರಂಜನ, ಗೀತಾನಾಗಭೂಷಣ, ವೈದೇಹಿ, ವೀಣಾಶಾಂತೇಶ್ವರ ಮೊದಲಾದವರು.

ಹೆಣ್ಣು ತನ್ನನ್ನು ತಾನು ಕಲೆಯ ನೆಲೆಯಲ್ಲಿ ಅವಲೋಕಿಸಿಕೊಳ್ಳುವ ತನಗೆ ತಾನೇ ತನ್ನ ಸ್ಥಿತಿಗಳನ್ನು ವಿವರಿಸಿಕೊಳ್ಳುವ ಕ್ರಮದ ಚಿಂತನೆಯೇ ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಪ್ರಧಾನ ಸಂಸ್ಕೃತಿಯ ದೃಷ್ಟಿಯಲ್ಲಿ ಅತ್ಯಂತ ಪ್ರಗತಿಪರವಾದುದು ಮತ್ತು ಕ್ರಾಂತಿಕಾರಿಯಾದುದು. ಇಂತಹ ಸಂದರ್ಭದಲ್ಲಿ ಸ್ವಾತಂತ್ರ್ಯಪೂರ್ವದಲ್ಲಿ ಅನೇಕ ಮಹಿಳಾ ಬರಹಗಾರ್ತಿಯರಿದ್ದರೂ ಸಹ 70ರ ದಶಕದಲ್ಲಿ 'ಫೆಮಿನಿಸಂ' ಎಂಬ ಒಂದು ಸೈದ್ಧಾಂತಿಕತೆಯನ್ನು ಒದಗಿಸಿಕೊಡುವುದರ ಮೂಲಕ ಸ್ತ್ರೀವಾದ ಭಾರತಕ್ಕೆ ಕಾಲಿಟ್ಟಿತು. ಜಗತ್ತಿನ ದೇಶಗಳಿಗೂ ಹರಡಿ ಅಲ್ಲಿನ ಸ್ತ್ರೀಯರು ತಮ್ಮ ಸ್ಥಿತಿಗತಿಗಳ ಬಗ್ಗೆ ಚಿಂತಿಸುವಂತೆ, ಹಕ್ಕುಗಳ ಬಗ್ಗೆ ಜಾಗೃತವಾಗುವಂತೆ ಮಾಡಿತು. ಸ್ತ್ರೀವಾದ ಪುರುಷ ದ್ವೇಷಿಯಾಗಿರದೇ ಒಂದು ಚಳುವಳಿಯಾಗಿ ನಮ್ಮನ್ನು ನಾವು ಅರಿಯಲು ಸಹಾಯಕವಾಯಿತು.

ಪ್ರತಿಭಟನೆ ಎಂದರೆ ತನಗೆ ಇಷ್ಟವಿಲ್ಲದ, ಸಾಧುವಲ್ಲದ, ಅನುಸರಿಸಲಾಗದ ನಿಯಮಗಳನ್ನು ಅನ್ಯಾಯವಾದಂತಹ ಸಂದರ್ಭದಲ್ಲಿ ಅನ್ಯಾಯ ಮಾಡಿದಂತಹ ವ್ಯವಸ್ಥೆಯ ವಿರುದ್ಧ ತಿರುಗಿ ಬೀಳುವುದು ಅಥವಾ ಮುಖಾಮುಖಿಯಾಗುವುದೇ ಆಗಿದೆ. ಇದು

ಶಾಬ್ಧಿಕವಾಗಿಯಲ್ಲದೇ ಅಶಾಬ್ಧಿಕ ಕ್ರಿಯೆಯಲ್ಲಿಯೂ ಇರಬಹುದು. ಮಾತಿನ ರೂಪದಲ್ಲಿರದೇ ಮೌನವಾಗಿಯೂ ಇರಬಹುದು. ಇಂತಹ ಪ್ರತಿಭಟನಾ ಮನೋಧರ್ಮವನ್ನು ಮಹಿಳಾ ಸಾಹಿತ್ಯದಲ್ಲಿ 12ನೇ ಶತಮಾನದಲ್ಲಿಯೇ ಅಕ್ಕಮಹಾದೇವಿಯ ವಚನಗಳ ಮೂಲಕ ಗುರುತಿಸಬಹುದು.

"ಜಲದ ಮಂಟಪದ ಮೇಲೆ ಉರಿಯ ಚಪ್ಪರವಿಕ್ಕಿ
ಆಲಿಕಲ್ಲ ಹಸೆಯಹಾಸಿ ಬಾಸಿಗವ ಕಟ್ಟಿ
ಕಾಲಿಲ್ಲದ ಹೆಂಡತಿಗೆ ತಲೆಯಿಲ್ಲದ ಗಂಡಬಂದು
ಮದುವೆಯಾದನು
ಎಂದೆಂದೂ ಬಿಡದ ಬಾಳುವೆಗೆ ಕೊಟ್ಟರೆನ್ನ
ಚೆನ್ನಮಲ್ಲಿಕಾರ್ಜುನನೆಂಬ ಗಂಡಂಗೆನ್ನ
ಮದುವೆ ಮಾಡಿದರೆಲೆಯವ್ವಾ" – ಸಾಂಪ್ರದಾಯಿಕ ಮದುವೆಯನ್ನು ಬಿಟ್ಟು ಅನುಭಾವದ ನೆಲೆಯಲ್ಲಿ ಅಕ್ಕ ತನ್ನ ಮದುವೆಯಾಗಿರುವುದನ್ನು ಹೇಳುತ್ತಾಳೆ.

"ಸಾವಿಲ್ಲದ ಕೇಡಿಲ್ಲದ ಚೆಲುವಂಗಾನೊಲಿದೆನವ್ವ
ಎಡೆಯಿಲ್ಲದ ಕಡೆಯಿಲ್ಲದ ತೆರಹಿಲ್ಲದ
ಕುರುಹಿಲ್ಲದ ಭಯವಿಲ್ಲದ ಚೆಲುವಂಗಾನೊಲಿದೆ
ಕುಲ ಸೀಮೆಯಿಲ್ಲದ ನಿಸ್ಸೀಮ ಚೆಲುವಂಗಾನೊಲಿದೆ
ಇದು ಕಾರಣ ಚೆನ್ನಮಲ್ಲಿಕಾರ್ಜುನ ಚೆಲುವ ಗಂಡನೆನಗೆ
ಈ ಸಾವ ಕೆಡುವ ಗಂಡನೋಯ್ದು ಒಲೆಯೊಳಗಿಕ್ಕು ತಾಯೆ"

ಈ ವಚನದಲ್ಲಿ ಲೌಕಿಕ ಗಂಡನನ್ನು ಬಿಟ್ಟು ಅಲೌಕಿಕ ವ್ಯಕ್ತಿಯಾದ ಚನ್ನಮಲ್ಲಿಕಾರ್ಜುನನನ್ನು ತನ್ನ ಗಂಡನೆಂದು ಒಪ್ಪಿಕೊಳ್ಳುತ್ತಾಳೆ. ಹೀಗೆ ಅಕ್ಕಮಹಾದೇವಿ ರಾಜಪ್ರಭುತ್ವ ಮತ್ತು ಪುರುಷ ಪ್ರಧಾನತೆಯ ವಿರುದ್ಧ ಪ್ರತಿಭಟನೆಯ ದನಿ ಎತ್ತಿರುವುದು ಕಂಡುಬರುತ್ತದೆ.

ಹೆಣ್ಣಿಗೆ ಸಂವೇದನೆಗಳೇ ಇಲ್ಲ. ಇದ್ದರೂ ಅದು ಪುರುಷ ಸಂವೇದನೆಗಳಿಗಿಂತ ಬೇರೆಯಾದುದಲ್ಲ ಎಂದು ನಂಬಿದ್ದ ಪುರುಷ ಪ್ರಧಾನತೆಗೆ 70ರ ದಶಕದಲ್ಲಿ ದನಿಯನ್ನು ನೀಡಿ ಆ ಮೂಲಕ ತನಗೂ ಭಿನ್ನ ರೀತಿಯ ಸಂವೇದನೆಗಳಿವೆ ಎಂಬುದನ್ನು ತೋರಿಸಿಕೊಟ್ಟ ಮಹಿಳಾ ಸಾಹಿತ್ಯವೇ ಪ್ರತಿಭಟನೆಯ ನೆಲೆಯಿಂದ ಕೂಡಿದ್ದಾಗಿದೆ.

"ಕಾರ್ಯೇಷು ಮಂತ್ರಿ ಕರಣೇಷು ದಾಸಿ
ಭೋಜ್ಯೇಷು ಮಾತಾ ಶಯನೇಷು ರಂಭಾ
ಧರ್ಮಾನುಕೂಲ ಕ್ಷಮಯಾಧರಿತ್ರಿ
ಷಡ್ಗುಣ್ಯ ಭಾರ್ಯಾಕುಲ ಮುದ್ಧರಂತಿ"[1] ಎಂಬುದನ್ನು ತಿರಸ್ಕರಿಸಿ ತಾನು ತನ್ನ ಸ್ವಂತ ವ್ಯಕ್ತಿತ್ವ, ಅಸ್ತಿತ್ವ ಹೊಂದಬೇಕೆಂಬುದನ್ನು ಮನಗಂಡು ಹಿಂದಿನಿಂದಲೂ ತನಗಾದ ಅನ್ಯಾಯವನ್ನು ನಾನಾ ರೀತಿಯಾಗಿ ಪ್ರತಿಭಟಿಸಿದ್ದಾಳೆ.

ಆಧುನಿಕ ಮಹಿಳಾ ಕಾವ್ಯದಲ್ಲಿ ಹೇಳುವುದಾದರೆ ಹೆಣ್ಣನ್ನು ಕಾಮದ ಕೇಂದ್ರದಲ್ಲಿಟ್ಟು ಬದುಕನ್ನು, ಸಮಾಜವನ್ನು ಅದರ ಮೌಲ್ಯಗಳನ್ನು ಶೋಧಿಸುವ ತಂತ್ರದಿಂದ ಪಾರುಮಾಡಿ ಪುರುಷಪ್ರಧಾನ ಸಮಾಜದ ಮೊಟ್ಟಮೊದಲ ಶೋಷಿತ ವ್ಯಕ್ತಿ ಆಕೆಯೆಂಬ ಅರಿವನ್ನು ತಳೆದದ್ದು ಒಂದು ಕ್ರಾಂತಿಕಾರಿ ದೃಷ್ಟಿಕೋನವಾಗಿದೆ. ಪುರುಷ ಪ್ರಧಾನ ಸಮಾಜದ ವಿರುದ್ಧ ಅವರ ದೋಷಗಳ ಮತ್ತು ಮೌಲ್ಯೀಕರಣದತ್ತ ಕೆಲವು ದನಿಗಳಾದರೂ ಕೇಳಿ ಬರಹತ್ತಿವೆ. ಅನೇಕ ಚಾರಿತ್ರಿಕ ಸ್ತ್ರೀ ಪಾತ್ರಗಳ ಪುನರ್‌ಮೌಲ್ಯೀಕರಣ ನಡೆದಿದೆ. ಧರ್ಮಶಾಸ್ತ್ರ, ಪುರಾಣಗಳು ಹೇಳಿರುವಂತಹ ಸೀತೆ, ಅಹಲ್ಯಾ, ಗಾಂಧಾರಿ, ಕುಂತಿ, ದ್ರೌಪತಿ ಮುಂತಾದ ಪಾತ್ರಗಳು ಧಾರ್ಮಿಕ ಪರಿಭಾಷೆಯಲ್ಲಿ ವ್ಯಾಖ್ಯಾನಗೊಳ್ಳುತ್ತಿರುವುದು ಶೋಷಣೆಗೊಳಗಾದ ಪಾತ್ರಗಳಾಗಿ, ಸಂಕೇತಗಳಾಗಿ ಮೂಡಿ ಬರುತ್ತಿವೆ.

ಉದಾ: ನಾನು
ಗಂಡನೇ ದೇವರೆಂದು
ವನವಾಸಮಾಡಿ
ಅಗ್ನಿಗೆ ಧುಮುಕುವ
ಸೀತೆಯಲ್ಲ
ನಾನು
ಗಂಡನ ಪ್ರಾಣಕ್ಕಾಗಿ
ಯಮನಹಿಂದೆ
ನಾಯಿಯಂತಲೆದ
ಸಾವಿತ್ರಿಯೂ ಅಲ್ಲ.[2] (ಎಂ.ಆರ್.ಕಮಲ) ಎಂದು ಪ್ರತಿಭಟಸುವಲ್ಲಿ ಆಧುನಿಕ ಕಾಲದ ಪಾತಳಿಯನ್ನು ಮೀರುತ್ತ ಹೊಸನೆಲೆಯ ಹುಡುಕಾಟಕ್ಕೆ ತೊಡಗುತ್ತಾರೆ.

ಅಲ್ಲದೇ ಪತಿವ್ರತೆಯರು ಎಂದು ಪಟ್ಟಕೊಡುವಂತಹ ಪುರುಷ ಪ್ರಧಾನತೆಗೆ ನಾವು ಪತಿವ್ರತೆಯರಲ್ಲ ಎಂದು ಹೇಳುವ ದಿಟ್ಟ ವ್ಯಕ್ತಿತ್ವವೂ ಇದೆ.

ಉದಾ: ನಿಮ್ಮ ಕಾಮಾಗ್ನಿ ಕುಂಡಕ್ಕೆ
ನಮ್ಮ ಶೀಲವನು ಬಲಿಗೊಟ್ಟು
ನಿಮ್ಮ ಮಾನಾಪಮಾನವನು
ಕಾಪಾಡಲು ನಿಮ್ಮಿಂದಲೇ
ಪತಿವ್ರತೆಯರ ಪಟ್ಟಕೇರಿ
ಪ್ರಾತಃಕಾಲದ ಸ್ಮರಣೆಯಲಿ
ಇಂದಿಗೂ ಉಳಿದು ನರಳುತ್ತಿರುವವರು
ನಾವು ಪತಿವ್ರತೆಯರಲ್ಲ[3] (ಎಚ್.ಎಸ್.ಮುಕ್ತಾಯಕ್ಕ)

ಭಾರತೀಯ ಪರಂಪರಾಗತ ಸಾಂಪ್ರದಾಯಿಕ ಸಿದ್ಧಮಾದರಿಯನ್ನು ಮೀರಿ, ಮೀರಲು ಇರುವ ಕಾರಣಗಳನ್ನು ಕೊಟ್ಟು ಹೊಸ ಬದುಕಿನ ಬಗ್ಗೆ ಸೂಚನೆಗಳನ್ನು ಕೊಡುತ್ತಾರೆ.

ಹೈದರಾಬಾದ್ ಕರ್ನಾಟಕದ ಸಾಮಾಜಿಕ ವ್ಯವಸ್ಥೆಯು ಸಂಪೂರ್ಣವಾಗಿ ಪುರುಷ ಪ್ರಧಾನವಾಗಿದ್ದು, ಇಂದಿಗೂ ಸ್ವಲ್ಪವೂ ಅಲುಗದ ಸ್ಥಿತಿಯಲ್ಲಿದೆ. ಇದರೊಂದಿಗೆ ಅನಕ್ಷರತೆ ಮೂಢನಂಬಿಕೆ, ಬಡತನ ಹಾಗೂ ಶ್ರೇಣೀಕರಣಗಳು ಸೇರಿಕೊಂಡು ಇನ್ನೂ ಭಯಂಕರವಾಗಿ ಗಟ್ಟಿಗೊಳ್ಳುತ್ತಿದೆ. ನಗರ ಪ್ರದೇಶದ ಚಹರೆಗಳು ಸ್ವಲ್ಪಮಟ್ಟಿಗೆ ಬದಲಾಗುತ್ತಿರುವುದು ಕಂಡುಬರುತ್ತಿದೆ.

12ನೇ ಶತಮಾನದ ವಚನ ಚಳುವಳಿಯ ಸಂದರ್ಭದಲ್ಲಿ ಸಮಾನ ನೆಲೆಯ ಸ್ಥಾನಮಾನವನ್ನು ಪಡೆದಿದ್ದ ಈ ಪ್ರದೇಶದ ಮಹಿಳೆ ನಂತರದ ರಾಜಕೀಯ ಸ್ಥಿತ್ಯಂತರಗಳ ಪ್ರಭಾವದಲ್ಲಿ ಪುನಃ ಅಧೀನ ಸ್ಥಿತಿಗೆ ತಳ್ಳಲ್ಪಟ್ಟು ಅವಕಾಶ ವಂಚಿತಳಾದದ್ದು ಮಾತ್ರವಲ್ಲ, ಹೆಣ್ಣು ಶಿಶುಮಾರಾಟ, ಭಾನಾಮತಿ, ಸಿಡಿ ಆಡುವುದು, ಬೆತ್ತಲೆ ಸೇವೆ ಹಾಗೂ ಜೋಗತಿಯಂಥ ಅನಿಷ್ಟ ಸಂಪ್ರದಾಯ ಆಚರಣೆಗಳಿಗೆ ಸಿಕ್ಕಿ ನರಳುತ್ತಿದ್ದಾಳೆ. ಮೇಲ್ವರ್ಗದ ಮಹಿಳೆ ರಕ್ಷಣೆಯ ನೆಪದಲ್ಲಿ ಗೃಹಬಂಧಿಯಾಗಿದ್ದರೆ ಕೆಳವರ್ಗದ ಮಹಿಳೆ ರಕ್ಷಣೆಯೇ ಇಲ್ಲದವಳಾಗಿದ್ದಾಳೆ. ಇಂತಹ ಒಂದು ವ್ಯವಸ್ಥೆಯ ಕ್ರೂರತನಗಳನ್ನು ಕುರಿತು ಪ್ರತಿಭಟಿಸುವ ಮನೋಭಾವವನ್ನು ಸಮಕಾಲೀನ ಲೇಖಕಿಯಾದಂತಹ ಗೀತಾನಾಗಭೂಷಣರವರ ಕಾದಂಬರಿಗಳಲ್ಲಿ ಕಾಣಬಹುದಾಗಿದೆ.

ಅಷ್ಟೇ ಅಲ್ಲದೇ ಕಾಲದೇಶಗಳನ್ನು ಮೀರಿದಂತಹ ಮಹಿಳಾ ವಿಷಯಗಳನ್ನು ಸಾಮಾನ್ಯ ನೆಲೆಯಲ್ಲಿ ಗುರುತಿಸುವುದು ಮತ್ತು ವೈದೇಹಿ, ವೀಣಾಶಾಂತೇಶ್ವರ ಅವರಂತಹ ಲೇಖಕಿಯರು ಮಹಿಳಾ ಸಂಕಥನಗಳನ್ನು ಕಟ್ಟುತ್ತಿರುವ ಈ ಕಾಲದಲ್ಲಿ ಹೆಣ್ಣಿನ ಪ್ರಶ್ನೆಗಳು ಯಾವುವು ಎಂಬುದನ್ನು ತಿಳಿಯುವ ಉದ್ದೇಶ ಈ ನಿಬಂಧದ್ದಾಗಿದೆ. ವರ್ತಮಾನದಲ್ಲಿ ನಿಂತು ಸ್ತ್ರೀ ಸಂವೇದನೆಯ ಸಾಹಿತ್ಯ ಪರಂಪರೆಯನ್ನು ಕಟ್ಟುವಂತಹ ಈ ಅಧ್ಯಯನಗಳಿಗೆ ವಿಶಿಷ್ಟ ಮಹತ್ವ ಇರುತ್ತದೆ ಎಂಬ ಉದ್ದೇಶದಿಂದ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಗೀತಾನಾಗಭೂಷಣರ ಹಸಿಮಾಂಸ ಮತ್ತು ಹದ್ದುಗಳು(1978) , ಆಸರೆಗಳು(1996) , ಬದುಕು(2001) ಎಂಬ ಮೂರು ಕಾದಂಬರಿಗಳ ವ್ಯಾಪ್ತಿಯೊಂದಿಗೆ ಪ್ರತಿಭಟನೆಯ ನೆಲೆಗಳನ್ನು ಹುಡುಕುವ ಪ್ರಯತ್ನವಿದೆ. ಈ ಕಾದಂಬರಿಗಳು ದಲಿತ ಬಂಡಾಯ ಮತ್ತು ಸ್ತ್ರೀವಾದಿ ಪ್ರಜ್ಞೆಯನ್ನು ಒಳಗೊಂಡಿದೆ. ಆದ್ದರಿಂದ ಸ್ತ್ರೀವಾದಿ ದೃಷ್ಟಿಕೋನವನ್ನು ಬಿಟ್ಟು ದಲಿತ ಬಂಡಾಯದ ಹಿನ್ನೆಲೆಯಲ್ಲಿ, ದಲಿತ ಬಂಡಾಯವನ್ನು ಬಿಟ್ಟು ಸ್ತ್ರೀವಾದಿ ಹಿನ್ನೆಲೆಯಲ್ಲಿ ನೋಡಲಾಗದು. ಏಕೆಂದರೆ ಈ ಎರಡು ಪ್ರಜ್ಞೆಗಳು ಸಹ ಒಂದರೊಳಗೊಂದು ಸೇರಿ ಹೋಗಿವೆ. ಆದ್ದರಿಂದ ಈ ಎರಡೂ ರೀತಿಯ ವೈಧಾನಿಕತೆಯನ್ನು ಈ ಪ್ರಬಂಧದಲ್ಲಿ ಅನುಸರಿಸಲಾಗಿದೆ.

ಗೀತಾನಾಗಭೂಷಣರನ್ನು ಕೇಂದ್ರವಾಗಿಟ್ಟುಕೊಂಡಿರುವ ಈ ಅಧ್ಯಯನ, ಆ ಕಾಲದ ಇತರ ಬರಹಗಾರರಿಗಿಂತ ಇವರ ವೈಶಿಷ್ಟ್ಯತೆ ಏನು ಎಂಬುದನ್ನು ಚರ್ಚಿಸುವ ಸ್ವರೂಪವನ್ನು ಹೊಂದಿದೆ, ಹಾಗೂ ಶುದ್ಧ ಸಾಹಿತ್ಯ ಕತೆಯನ್ನು ಮೀರಿ ಸಮಾಜೋ–ಸಾಂಸ್ಕೃತಿಕತೆಯನ್ನು ಹೊಂದಿದೆ. ಹೈದ್ರಾಬಾದ್‌ನ ಪ್ರಾದೇಶಿಕತೆಯನ್ನು ಒಳಗೊಂಡಿರುವುದರಿಂದ ವಿಶಿಷ್ಟವಾದಂತಹ ಸಮಸ್ಯೆಗಳು ಇವೆಯಾ ಎಂಬುದನ್ನು ಅರ್ಥೈಸಲು ಪ್ರಯತ್ನಿಸುತ್ತದೆ.

"ಹಸಿಮಾಂಸ ಮತ್ತು ಹದ್ದುಗಳು" ಕಾದಂಬರಿಯಲ್ಲಿ ಕಪ್ಪು ಬಿಳುಪು ಪಾತ್ರಗಳೇ ಹೆಚ್ಚಾಗಿದ್ದು, ಪುರುಷ ಪ್ರಧಾನತೆಯ ಕ್ರೌರ್ಯವೇ ತುಂಬಿದ್ದು, ಕೊನೆಗೆ ಗಂಡು ಎಂಬುದನ್ನೇ ತಿರಸ್ಕರಿಸುವ, ವಿರೋಧಿಸುವ ಮಟ್ಟದಲ್ಲಿ ಈ ಕಾದಂಬರಿ ಕೊನೆಯಾಗುತ್ತದೆ. ಎಷ್ಟೇ ಪ್ರತಿಭಟನೆಯನ್ನು ಮಾಡಿದರೂ ಸಹ ಶೋಷಣೆಯ ವಿಭಿನ್ನವಾದ ಕರಾಳ ಮುಖಗಳಿಂದ ಆಕೆ ಬಿಡುಗಡೆಗೊಳ್ಳುವುದೇ ಇಲ್ಲ. ಪುರುಷ ಪ್ರಧಾನ್ಯತೆಯ ಆಕ್ರಮಣದೊಂದಿಗೆ ಅವಳ ಅಂತ್ಯವೂ ಆಗುತ್ತದೆ.

"ಆಸರೆಗಳು" ಕಾದಂಬರಿ ಹೆಣ್ಣು ತಂದೆ, ಗಂಡ, ಮಗನ ಆಶ್ರಯದಲ್ಲಿ ಇರಬೇಕು. ಗಂಡು ಮರವಿದ್ದ ಹಾಗೆ ಹೆಣ್ಣು ಬಳ್ಳಿಯಿದ್ದ ಹಾಗೆ, ಬಳ್ಳಿ ಸ್ವತಂತ್ರವಾಗಿರಲು ಬಿಡಬಾರದೆಂಬ ರೂಢಿಗತ ಶಾಸ್ತ್ರದ ಮಾತನ್ನು ಹೊಂದಿದ ಕಥೆಯಾಗಿದ್ದು ಇವ್ಯಾವುದರ ಆಸರೆಯೂ ಇಲ್ಲದೇ ಬದುಕಬಹುದು. ಯಾರಿಗೆ ಯಾರೂ ಈ ಲೋಕದಲ್ಲಿ ಆಸರೆಯಿಲ್ಲ ಎಂಬ ಹೆಣ್ಣಿನ ದಿಟ್ಟತನವನ್ನು ಹೊಂದಿದೆ. ದಿಟ್ಟತನದ ಇಂತಹ ಪಾತ್ರಗಳೇ ಪ್ರತಿಭಟನೆಗೆ ಮಾದರಿಗಳಾಗಿವೆ.

"ಬದುಕು" ಕಾದಂಬರಿ ಬರಿಯ ಬದುಕು ಅಷ್ಟೇ ಆಗಿರದೇ ವಿವಿಧ ರೀತಿಯ ವಿಭಿನ್ನ ಬದುಕುಗಳ ದರ್ಶನವಾಗಿದ್ದು, ತುಳಜಾ ಜೋಗಿಣಿಯಾಗಿ ವ್ಯವಸ್ಥೆಯನ್ನು ವಿರೋಧಿಸುವುದು, ಕಾಶವ್ವ ಮಾರ್ತಾಂಡನನ್ನು ವಿವಾಹವಾಗಿ ತನ್ನ ಪ್ರಿಯತಮನಾದ ಲಿಂಗರಾಜನೊಂದಿಗೆ ಬಾಳ್ವೆ ಮಾಡುವುದು. ಬೆಳ್ಳಿ ತನ್ನ ಗಂಡ ಕಲ್ಯಾಣಿ ಜೈಲು ಸೇರಿದರೂ ದಿಟ್ಟತನದಿಂದ ಬದುಕುವುದು ಪ್ರತಿಭಟನೆಯ ಸ್ವರೂಪವನ್ನು ಪಡೆಯುತ್ತದೆ.

ಈ ಮೂರು ಕಾದಂಬರಿಗಳು ಸಹ ಪುರುಷ ಪ್ರಧಾನತೆಯಲ್ಲಿನ ಕ್ರೌರ್ಯ ಶೋಷಣೆಗಳನ್ನು ಪ್ರತಿಭಟಿಸುತ್ತವೆಯಾದರೂ ಭಿನ್ನ ನೆಲೆಗಳಿವೆ ಎಂಬುದನ್ನು ತಿಳಿಯಲು ಸಾಮಾಜಿಕ ನೆಲೆ, ಶೋಷಣೆಯ ನೆಲೆ, ಲಿಂಗಾಧಾರಿತ ಪ್ರಶ್ನೆಗಳು ಎಂಬ ವಿಭಾಗಗಳನ್ನು ಮಾಡಿಕೊಳ್ಳಲಾಗಿದೆ.

ಪುರುಷ ಪ್ರಧಾನತೆ ಎಂಬುದು ಚಾರಿತ್ರಿಕ ನಿರ್ಮಿತಿಯಾಗಿದ್ದು, ಅದು ಎಲ್ಲಾ ರೀತಿಯ ತಾರತಮ್ಯದ ಶೋಷಣೆಗೆ ಹೇಗೆ ಕಾರಣವಾಗಿದೆ ಸಮಾಜದಲ್ಲಿ ಊಳಿಗಮಾನ್ಯ ಮತ್ತು ಪುರೋಹಿತಶಾಹಿ ವ್ಯವಸ್ಥೆಗಳು ಜಾತಿ ಮತ್ತು ವರ್ಗ ಎಂಬುದರಿಂದಲೇ ಶೋಷಣೆಗೆ ಹೇಗೆ ಒಳಗು ಮಾಡುತ್ತಿವೆ, ಹೆಣ್ಣು ಹೆಣ್ಣಾಗಿ ಹುಟ್ಟಿರುವುದರಿಂದಲೇ ಆಕೆ ಎಲ್ಲಾ ರೀತಿಯ ಶೋಷಣೆಗೆ ಒಳಗಾಗುತ್ತಿದ್ದಾಳೆಯೇ, ಬರಿಯ ಹೆಣ್ಣಿನ ಶೋಷಣೆ ಮಾತ್ರವೆ ಅಥವಾ ಒಂದು ಸಮುದಾಯದ ಶೋಷಣೆಯೂ ಇದೆಯೇ, ಶೋಷಣೆ ಎಂಬುದು ಕೆಳವರ್ಗದ ಸ್ತ್ರೀಗೆ ಮಾತ್ರವೇ, ಲಿಂಗವ್ಯವಸ್ಥೆಯೇ ಹೆಣ್ಣಿನ ಶೋಷಣೆಗೆ ಹೇಗೆ ಪ್ರಬಲ ಮಾರ್ಗವಾಗಿದೆ, ಲಿಂಗತಾರತಮ್ಯದ ನೆಲೆಯಲ್ಲಿ ಪ್ರತಿಭಟನೆಗೆ ಹೇಗೆ ಹುಟ್ಟಿಕೊಳ್ಳತ್ತದೆ, ಹೆಣ್ಣು ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಹೋರಾಡುವುದು ಹೆಣ್ಣಾಗಿಯೋ, ಹೆಣ್ತನಕ್ಕಾಗಿಯೋ, ಹೆಣ್ಣನ್ನು ಪ್ರತಿನಿಧೀಕರಣಗೊಳಿಸುವ ಅಂಶಗಳೇನಾದರೂ ಇವೆಯೇ ಎಂಬಂತಹ ಹಲವಾರು ಪ್ರಶ್ನೆಗಳಿಗೆ ಸ್ತ್ರೀ ಮುಖಾಮುಖಿಯಾಗುವಂತಹ ವೈಚಾರಿಕ ಮನಸ್ಥಿತಿ ಮತ್ತು ಸನ್ನಿವೇಶಗಳನ್ನು ಈ ಅಧ್ಯಯನದಲ್ಲಿ ಚರ್ಚೆ ಮಾಡುವ ಪ್ರಯತ್ನವಿದೆ.

‘ಗೀತಾನಾಗಭೂಷಣರ ಬರಹದ ವಿಶಿಷ್ಟತೆ’ ಅಧ್ಯಾಯದಲ್ಲಿ ಕಾದಂಬರಿಗಳನ್ನು ಬರೆಯಲು ವೈಯಕ್ತಿಕ ಬದುಕು ಪ್ರೇರಣೆಯಾದ ರೀತಿಯಾವುದು, ಕಾದಂಬರಿಯಲ್ಲಿ ಕಥನ ತಂತ್ರ, ನಿರೂಪಣಾ ವಿಧಾನ ಹೇಗಿದೆ. ಕೆಳವರ್ಗದ ಸಮಾಜವೇ ಇವರ ಸಾಹಿತ್ಯದ ವಸ್ತು ಏಕಾಗಿದೆ, ಭಾಷೆಯಲ್ಲಿನ ವರ್ಣನೆ, ನುಡಿಗಟ್ಟು, ಗಾದೆಗಳು, ಜನಪದೀಯ ಉಪಮೆಗಳು, ಹೆಣ್ಣಿನ ಕುರಿತ ಮಾತುಗಳು, ಭಾಷೆಯ ಮೂಲಕ ಹೆಣ್ಣು ಮತ್ತು ಗಂಡಿನ ಬಗ್ಗೆ ಇರುವಂತಹ ನೋಟ ಕ್ರಮ ಯಾವುದು, ಲೇಖಕಿಯೊಬ್ಬಳು ಗ್ರಹಿಸುವ ಕ್ರಮ ಏನು, ಹಾಗೂ ಸ್ತ್ರೀಪಾತ್ರ ಚಿತ್ರಣದಲ್ಲಿ ವ್ಯವಸ್ಥೆಯನ್ನು ಒಪ್ಪಿ ನಡೆಯುವಂತಹ, ವಿರೋಧಿಸುತ್ತಾ ಹಿಂಸೆ ಪಡುವಂತಹ ಹಾಗೂ ವಿಭಿನ್ನ ಸಂಬಂಧಗಳು ಹೇಗಿವೆ ಎಂಬುದನ್ನು ಚರ್ಚಿಸುವ ಪ್ರಯತ್ನವಿದೆ.

ಡಾ॥ ಎಲ್.ಜಿ.ಮೀರಾರವರು ‘ಸ್ತ್ರೀ ಸಂವೇದನೆಯಲ್ಲಿ ಕನ್ನಡ ಕಥನ’ ಎಂಬ ಸಂಶೋಧನಾಗ್ರಂಥದಲ್ಲಿ ದಂಗೆ ಕಾದಂಬರಿ ಕುರಿತು “ಅನ್ಯಾಯದ ವಿರುದ್ಧ ಪ್ರತಿಭಟನೆ ಇದ್ದರೂ ಬುಡಮೇಲು ಮಾಡುವ ಶಕ್ತಿ ಪ್ರತಿಭಟನೆಗಳಿಗಿರುವುದಿಲ್ಲ ಸ್ತ್ರೀಯರಲ್ಲಿ ಸಂಘಟನೆಯ ಕೊರತೆ, ತನ್ಮೂಲಕ ಒಂದು ಬಲಿಷ್ಠ ಸಂಸ್ಕೃತಿಯ ಗೈರು ಹಾಜರಿ ಪರಿಣಾಮವಾಗಿ ಪಿತೃ ಪ್ರಧಾನ ವ್ಯವಸ್ಥೆಯ ನಿರಂತರ ದರ್ಬಾರು ಪ್ರತಿಭಟನೆಯ ಇತ್ಯಾತ್ಮಕ ಪ್ರಯತ್ನಗಳಿವೆ”[4] ಎಂದು ಹೇಳುತ್ತಾರೆ.

ಡಾ॥ ಮೀನಾಕ್ಷಿ ಬಾಳಿ ‘ಗೀತಾನಾಗಭೂಷಣ ಅವರ ಕಾದಂಬರಿಗಳಲ್ಲಿ ಮಹಿಳಾ ಸಂವೇದನೆ’ ಎಂಬ ಲೇಖನದಲ್ಲಿ “ಶರಹದಲ್ಲಿಯ ಝೋಪಡ ಪಟ್ಟಿಯ ರೂಕ್ಷವಾದ ಬದುಕನ್ನು ಏನೇನೂ ವೈಭವೀಕರಿಸದೇ ಅದಿರುವ ಸ್ಥಿತಿಯಲ್ಲೇ ಬಟಾ ಬಯಲುಗೊಳಿಸುತ್ತಲೇ ಮುಖ್ಯವಾಗಿ ಅಂತಹ ಪ್ರದೇಶದಲ್ಲಿರುವ ಹೆಣ್ಣುಗಳ ಅಸಹಾಯಕ ಸ್ಥಿತಿಗೆ ಅಕ್ಷರದ ದನಿಯಾಗುವ ಕೆಲಸವನ್ನು ಗೀತಾ ಅವರು ಒಂದು ವ್ರತದಂತೆ ಪಾಲಿಸಿಕೊಂಡು ಬಂದಿದ್ದಾರೆ. ಇವರ ಕಾದಂಬರಿಯ ನಾಯಕಿಯರು ತಮ್ಮಷ್ಟಕ್ಕೆ ಶಕ್ತಿಯಾಗಿ ಸೃಷ್ಟಿಯಾಗದೇ ಲೇಖಕಿಯ ಕೈಗೊಂಬೆಯಾಗಿ ನಿಲ್ಲುತ್ತಾರೆ.”[5] ಎಂದು ಹೇಳುತ್ತಾರೆ.

ಕವಿತಾರೈ. ಬಿ.ಆರ್. ‘ಮಹಿಳಾ ಅಸ್ತಿತ್ವ ಸಂಕಥನ ಒಂದು ಪರಿಕಲ್ಪನಾತ್ಮಕ ಅಧ್ಯಯನ’ದಲ್ಲಿ “ಗಂಡಸರಿಗೆ ಶತಮಾನಗಳಿಂದಲೇ ಬೇಡವಾಗಿರುವ ಕುಟುಂಬ ವ್ಯವಸ್ಥೆ, ಹೆಂಗಸರ ಆತ್ಮಸ್ಥೈರ್ಯ, ತ್ಯಾಗ, ಜೀವನದ ಮೇಲೆ ಮಾತ್ರವೇ ನಿಂತಿರುವಂತೆ ಕಾಣಬರುತ್ತದೆ. ಇದನ್ನು ಅತಿಶಕ್ತವಾಗಿ ಗೀತಾ ನಾಗಭೂಷಣ ಅವರ ಎಲ್ಲಾ ಕಾದಂಬರಿಗಳು ಬಿಂಬಿಸುತ್ತವೆ”[6] ಎನ್ನುತ್ತಾರೆ.

ಹೀಗೆ ಗೀತಾನಾಗಭೂಷಣರ ಕೃತಿಗಳು ಅಧ್ಯಯನಕ್ಕೆ ಒಳಪಟ್ಟಿವೆ. ಇವರ ಕಾದಂಬರಿಗಳಲ್ಲಿ ಮಹಿಳಾ ಸಾಹಿತ್ಯ ಪುರುಷ ಪ್ರಧಾನತೆಯಿಂದಲೇ ಹೇಗೆ ನೋಡುತ್ತದೆ. ಸಮಾಜದ ದೃಷ್ಟಿಕೋನವೇ ಗೀತಾರವರ ದೃಷ್ಟಿಕೋನವಾಗಿದೆಯೇ, ಭಾವುಕತೆಯೊಳಗೆ ಇರುವ ಕಾದಂಬರಿಗಳಲ್ಲಿ ಲೋಕ ನೋಡುವ ಕ್ರಮ ಯಾವುದು, ಇವರ ಕಾದಂಬರಿಗಳಲ್ಲಿ ದ್ವಂದ್ವತೆ ಎಂಬುದಿದೆಯೇ, ಭಾಷೆಯಲ್ಲಿ ಸಂಕೀರ್ಣತೆ ಇದೆಯೇ ಎಂಬ ಅಂಶಗಳನ್ನಿಟ್ಟುಕೊಂಡು ಮೂರು ಕಾದಂಬರಿಗಳ ವ್ಯಾಪ್ತಿಯೊಳಗೆ ಅಧ್ಯಯನ ಮಾಡುವ ಉದ್ದೇಶವನ್ನು ಈ ಪ್ರಬಂಧ ಹೊಂದಿರುತ್ತದೆ.

## ಅಡಿಟಿಪ್ಪಣಿಗಳು

1. ಮುಕ್ತಾಯಕ್ಕ ಎಚ್.ಎಸ್ : ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ. ಪುಟ 90
2. ಮಲ್ಲಿಕಾ ಘಂಟಿ : ದಲಿತ ಬಂಡಾಯ ಸಾಹಿತ್ಯದಲ್ಲಿ ಬದಲಾವಣೆಯ ಆಶಯ ಮತ್ತು ಸ್ತ್ರೀ. ಪುಟ 188(ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ – ವಿವಿಧ ಲೇಖಕರು)
3. ಮುಕ್ತಾಯಕ್ಕ ಎಚ್.ಎಸ್ : ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ. ಪುಟ 191.
4. ಮೀರಾ.ಎಲ್.ಜಿ : ಸ್ತ್ರೀ ಸಂವೇದನೆಯಲ್ಲಿ ಕನ್ನಡ ಕಥನ. ಪುಟ 133.
5. ಮೀನಾಕ್ಷಿಬಾಳಿ : ಗೀತಾನಾಗಭೂಷಣ ಅವರ ಕಾದಂಬರಿಗಳಲ್ಲಿ ಮಹಿಳಾ ಸಂವೇದನೆ. ಪುಟ 42. (ಗೀತಾನಾಗಭೂಷಣ ಕಲ್ಬುರ್ಗಿಯ ಸ್ಪಂದನ – ಡಾ॥ ಸರಸ್ವತಿ ಚಿಮ್ಮಲಗಿ)
6. ಕವಿತಾ ರೈ.ಬಿ.ಆರ್ : ಮಹಿಳಾ ಸಂಘಟನೆ ಒಂದು ಪರಿಕಲ್ಪನಾತ್ಮಕ ಅಧ್ಯಯನ. ಪುಟ 243.

ಅಧ್ಯಾಯ – 2

# ಗೀತಾ ನಾಗಭೂಷಣರ ಕಾದಂಬರಿಗಳಲ್ಲಿ ಪ್ರತಿಭಟನೆಯ ವಿಭಿನ್ನ ನೆಲೆಗಳು

1. ಸಾಮಾಜಿಕ ನೆಲೆ
2. ಲಿಂಗಾಧಾರಿತ ಪ್ರಶ್ನೆಗಳು
3. ಶೋಷಣೆಯ ನೆಲೆ

# ಅಧ್ಯಾಯ – 2

## ಪ್ರತಿಭಟನೆಯ ವಿಭಿನ್ನ ನೆಲೆಗಳು

ಕನ್ನಡದ ಇತ್ತೀಚಿನ ಪ್ರಮುಖ ಮಹಿಳಾ ಕಾದಂಬರಿ ಕಾರರಲ್ಲಿ ಗೀತಾನಾಗಭೂಷಣರವರು ಒಬ್ಬರು. ಇವರ ಕಾದಂಬರಿಗಳಲ್ಲಿ ಮಹಿಳಾ ಸಾಹಿತ್ಯ ಮತ್ತು ದಲಿತ ಬಂಡಾಯ ಎರಡೂ ಪ್ರಕಾರಗಳೂ ಸಹ ಒಂದರೊಳಗೊಂದು ಬೆಸೆದಿದ್ದು ಅವುಗಳನ್ನು ಬೇರ್ಪಡಿಸಿ ನೋಡಲು ಸಾಧ್ಯವೇ ಇಲ್ಲವೇನೋ ಎನ್ನಿಸುತ್ತದೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂದು ಸಮಾಜ ರೂಪಿಸಿದ ಚಾತುರ್ವರ್ಣ್ಯ ವ್ಯವಸ್ಥೆಯಲ್ಲಿ ಶೂದ್ರ ದಲಿತನಾದರೆ ಆ ದಲಿತರಲ್ಲೂ ದಲಿತಳಾದವಳು ಮಹಿಳೆ ಎಂಬುದನ್ನು ತಿಳಿಯಬೇಕಿದೆ. ಪುರುಷನೇ ಶೂದ್ರನಾದ ಮೇಲೆ ಮಹಿಳೆ ಶೂದ್ರಳಲ್ಲಿಯೂ ಶೂದ್ರಳು ಎಂಬುದನ್ನು ಪುರುಷ ಪ್ರಧಾನ ವ್ಯವಸ್ಥೆ ಕಟ್ಟಿಕೊಟ್ಟಿದೆ. ಇಂತಹ ವ್ಯವಸ್ಥೆ ಮಹಿಳೆಗೆ ಹಲವಾರು ರೀತಿಯ ಶೋಷಣೆಗಳನ್ನು ನೀಡುತ್ತಾ, ತನ್ನ ಚಹರೆಗಳನ್ನು ಕಾಯ್ದುಕೊಳ್ಳುತ್ತಾ ಆಳವಾಗಿ ಬೇರೂರಿದೆ. ಈ ಆಳವಾದ ವ್ಯವಸ್ಥೆಯನ್ನು ಮೀರಲು ಅನೇಕ ಪ್ರತಿಭಟನೆಗಳು ಪ್ರತಿಕ್ರಿಯೆಗಳು ನಡೆಯುತ್ತಿರುತ್ತವೆ. ಪ್ರಧಾನವರ್ಗ ತಾನು ಪ್ರಧಾನವಾಗಿರಬೇಕೆಂದು ಕೆಳಗಿನ ವರ್ಗವನ್ನು ತುಳಿದರೆ, ಕೆಳಗಿನ ಅಧೀನ ವರ್ಗ ತಾನು ಏನಾದರೂ ಮಾಡಿ ಪ್ರಧಾನ ವರ್ಗದಂತಾಗಬೇಕೆಂದು ಕಾಲದಿಂದ ಕಾಲಕ್ಕೆ ಅದರಲ್ಲಿ ತಹ ತಹ ಭಾವನೆಗಳು, ಮಾತುಗಳು, ಹಾಗೂ ಮೌನಗಳ ಮೂಲಕ ಪ್ರತಿರೋಧವನ್ನು ಒಡ್ಡುತ್ತಲೇ ಮುಖಾಮುಖಿಯಾಗುತ್ತಿರುತ್ತದೆ. ಇಂತಹ ಅಂಶಗಳನ್ನು ಒಳಗೊಂಡಿರುವಂತಹ ಗೀತಾರವರ ಕಾದಂಬರಿಗಳನ್ನು

1. ಸಾಮಾಜಿಕ ನೆಲೆ
2. ಲಿಂಗಾಧಾರಿತ ಪ್ರಶ್ನೆಗಳು
3. ಶೋಷಣೆಯ ನೆಲೆ

ಎಂದು ಮೂರು ವಿಭಾಗಗಳಾಗಿ ವಿಂಗಡಿಸಿಕೊಂಡು ಮೂರು ಕಾದಂಬರಿಗಳ ವ್ಯಾಪ್ತಿಯೊಂದಿಗೆ ಅಧ್ಯಯನ ಮಾಡಲಾಗಿದೆ. ಆದ್ದರಿಂದ ಕೆಲವೊಂದು ಅಂಶಗಳು ಮತ್ತೆ ಮತ್ತೆ ಪುನರಾವರ್ತನೆಯಾಗುತ್ತಿರುತ್ತವೆಯಾದರೂ ಅವುಗಳನ್ನು ನೋಡುವ ದೃಷ್ಟಿಕೋನದಿಂದಲೇ ಮುಂದುವರೆಯುತ್ತವೆ.

ಸ್ತ್ರೀ ಸಂವೇದನೆಯು ಕುಟುಂಬ ಮತ್ತು ಸಮಾಜ ಎರಡು ಪ್ರಧಾನ ಧಾರೆಗಳಿಂದ ಸಂಸ್ಕೃತಿಯ ಮಾನವೀಯ ಸಂಬಂಧಗಳನ್ನು ಸೃಷ್ಟಿಸುವ ಮತ್ತು ಬೆಳೆಸುವ ವಿಕಸಿಸುವ ಪ್ರವೃತ್ತಿಗೆ ಒಳಪಟ್ಟು ಸರ್ವೋದಯದ ತೃಪ್ತ ಸಮಾಜಕ್ಕೆ ಬೇಕಾದ ಮೌಲ್ಯಗಳನ್ನು ರೂಪಿಸುತ್ತಿದ್ದರೆ ಇದಕ್ಕೆ

ವೈರುಧ್ಯ ಎಂಬಂತೆ ಯಾವಾಗಲೂ ಅತೃಪ್ತ ಸ್ಥಿತಿಯಲ್ಲಿ ಭೋಗದ ಗುರಿಯಲ್ಲಿ ಯಾಜಮಾನ್ಯದ ದಾಹದಲ್ಲಿ ಸದಾ ತನ್ನ ಅಸ್ತಿತ್ವಕ್ಕೆ ಬೇಕಾದ ಮಾನದಂಡಗಳನ್ನು ರೂಪಿಸಿಕೊಳ್ಳುವಲ್ಲಿ ಪುರುಷ ಪ್ರಧಾನ ವ್ಯವಸ್ಥೆಯು ಕ್ರಿಯಾಶೀಲವಾಗಿರುತ್ತದೆ. ಮತ್ತು ಸರ್ವಾಧಿಕಾರತ್ವದ ಮನೋಭಾವವನ್ನು ವ್ಯಕ್ತಪಡಿಸುತ್ತದೆ. ಈ ದೃಷ್ಟಿಕೋನದಿಂದ ಗೀತಾರವರ ಕಾದಂಬರಿಗಳನ್ನು ಅಧ್ಯಯನ ಮಾಡಬಹುದಾಗಿದೆ.

**1 ಸಾಮಾಜಿಕ ನೆಲೆ:–**

ಮಾನವ ಸಮಾಜ ಜೀವಿಯೂ ಹೌದು, ಸಂಘ ಜೀವಿಯೂ ಹೌದು. ಸಮಾಜವನ್ನಗಲಿ ಅವನು ಬದುಕಲಾರ. ತನ್ನ ಕಾರ್ಯ ಚಟುವಟಿಕೆಗಳನ್ನು ಮಾಡಲಾರ. ಒಂದು ನಿರ್ದಿಷ್ಟ ಪ್ರದೇಶದಲ್ಲಿ, ಒಂದು ನಿರ್ದಿಷ್ಟ ಜನರ ಸಮುದಾಯ ವಾಸಿಸುವ ವ್ಯವಸ್ಥೆಯನ್ನು ಸಮಾಜ ಎನ್ನಬಹುದಾಗಿದೆ. ಪರಸ್ಪರ ಅಂತಃ ಕ್ರಿಯೆಯೇ ಸಮಾಜದ ಲಕ್ಷಣವಾಗಿದ್ದು ಹಲವಾರು ಸಮೂಹ ಮತ್ತು ಸಮುದಾಯಗಳಿಂದ ಸಮಾಜ ನಿರ್ಮಾಣವಾಗಿದೆ. ಸಮಾಜ ಮಾನವ ಸಂಬಂಧಗಳ ಬಲೆಯಾಗಿದ್ದು ಮಾನವ ತನಗೆ ಅನುಕೂಲವಾಗುವ ರೀತಿಯಲ್ಲಿ ಸಮಾಜದಲ್ಲಿ ಬದುಕುಳಿಯಲು ಕುಟುಂಬ, ವಿವಾಹ, ಧರ್ಮ ಮತ್ತಿತ್ತರ ಸಂಘ ಸಂಸ್ಥೆಗಳನ್ನ ರೂಪಿಸಿಕೊಂಡು ಮತ್ತು ಕೆಲವೊಂದು ಕಟ್ಟು ಪಾಡುಗಳನ್ನು ನೀತಿ ನಿಯಮಗಳನ್ನು ನಿರ್ಮಿಸಿಕೊಂಡಿದ್ದಾನೆ. ಮಾನವನ ಅನುಕೂಲಕ್ಕಾಗಿಯೇ ರೂಪುಗೊಂಡ ಈ ಸಾಮಾಜಿಕ ಸಂಸ್ಥೆಗಳು ಪ್ರಸ್ತುತವಾಗಿ ಅಧಿಕಾರದ ಕೇಂದ್ರಗಳಾಗಿಯೂ ಮಾರ್ಪಾಡಾಗಿರುವುದನ್ನು ಕಾಣಬಹುದು. ಅಷ್ಟೇ ಅಲ್ಲದೇ ಏಕಮುಖತೆಯಿಂದ ಇದ್ದಂತಹವು ಬಹು ಮುಖಗಳಾಗಿಯೂ ಇರುವುದು ಇಂದು ಕಂಡುಬರುತ್ತಿದೆ. ಎಲ್ಲಾ ನೀತಿ ನಿಯಮಗಳು ಕೆಳವರ್ಗಕ್ಕಿಂತಲೂ ಮೇಲ್ವರ್ಗಕ್ಕೆ ಪೂರಕವಾಗಿಯೆ ಇವೆ.

ಶತಶತಮಾನಗಳಿಂದಲೂ ಸಮಾಜ ವ್ಯವಸ್ಥೆ ಎಂಬುದು ಪುರುಷನ ಅಧೀನದಲ್ಲಿಯೇ ಇರುವುದರಿಂದ ಇಲ್ಲಿನ ಎಲ್ಲಾ ಆಗು–ಹೋಗುಗಳ ಸಂಪೂರ್ಣ ನಿಯಂತ್ರಣ ಅವನ ಕೈಯಲ್ಲೇ ಭದ್ರವಾಗಿದೆ. ಪ್ರತಿಯೊಂದನ್ನು ತನಗೆ ಅನುಕೂಲವಾಗುವಂತೆ ನಿರ್ವಹಿಸುವ ವ್ಯಾಖ್ಯಾನಿಸುವ ಹಾಗೂ ನಿರ್ದೇಶಿಸುವ ಅವಕಾಶಗಳು ಅವನಿಗೆ ದಕ್ಕಿವೆ. ಈ ಪುರುಷ ಪ್ರಧಾನ ಚಿಂತನಾ ವ್ಯವಸ್ಥೆ ತನ್ನ ಸೇವೆಗೆ ಬೇಕಾದ ಹಾಗೆ ಮಹಿಳೆಯನ್ನು ವ್ಯಾಖ್ಯಾನಿಸುತ್ತಾ, ನಿರ್ದೇಶಿಸುತ್ತಾ ಬಂದಿದೆ.

ವೇದಗಳ ಕಾಲದಿಂದೀಚೆಗೆ ಸ್ತ್ರೀಯರ ಬಗ್ಗೆ ಅನಾದರ ಭಾವ ಧಾರ್ಮಿಕವಾಗಿ ಹುಟ್ಟಿಕೊಂಡು ನಂತರ ಸಾಮಾಜಿಕ, ಸಾಂಸ್ಕೃತಿಕವಾಗಿಯೂ ಗಟ್ಟಿಗೊಂಡಿತು. ಸ್ಮೃತಿಗಳ (ಮನು) ಉಗಮದಿಂದ ಹೆಣ್ಣಿನ ಹುಟ್ಟು ಅನಿಷ್ಟವಾಗಿ ಪರಿಣಮಿಸಿತು. 'ಮನು' ಎಂಬ ನ್ಯಾಯ ಶಾಸ್ತ್ರಜ್ಞರು ಬರೆದ ಸ್ಮೃತಿ ಹಿಂದೂ ಧರ್ಮದ ಪವಿತ್ರ ಗ್ರಂಥವಾಗುತ್ತ ಅದು ಮನುಷ್ಯ ಮನುಷ್ಯರ ನಡುವೆ ಅಗಾಧ ಕಂದಕ ತೋಡಿತು. ಮನುಕುಲವನ್ನು ವರ್ಣಾಧಾರಿತವಾಗಿ ವಿಂಗಡಿಸಿದ್ದಷ್ಟೇ ಅಲ್ಲ, ವರ್ಣಾಶ್ರಮ ಧರ್ಮದ ಬೇಲಿಯನ್ನು ಉಕ್ಕಿನಿಂದ ನಿರ್ಮಿಸಿದ. ಈ ಬೇಲಿ ದಾಟುವ ಪ್ರಯತ್ನ ಮಾಡಿದವರಿಗೆ ಶಿಕ್ಷೆಗಳನ್ನು ಹೇಳಿಕೊಟ್ಟ ಹೀಗೆ ಹೇಳಿಕೊಟ್ಟ ಶಿಕ್ಷೆಗಳನ್ನೆಲ್ಲ ರಾಜಸತ್ತೆ ನಿರ್ದಯವಾಗಿ ಬಳಕೆಯಲ್ಲಿ ತಂದಿತು. ಮನು ಒಟ್ಟು ಮನುಷ್ಯರ ಸಾಮಾಜಿಕ ಬದುಕಿನ ವಿಭಜನೆ ಮಾಡಿದ್ದಷ್ಟೇ ಅಲ್ಲ ಎಲ್ಲಾ ವರ್ಗದ ಸ್ತ್ರೀಯರಿಗೆ ವಿಶೇಷವಾದ ಕಾನೂನುಗಳನ್ನು ಮಾಡಿದ. ಮೇಲು ನೋಟಕ್ಕೆ ಈ ಕಾನೂನುಗಳು ಮಹಿಳೆಯರನ್ನು ಗೌರವದ ಸ್ಥಾನಕ್ಕೇರಿಸಿದ್ದರೂ ವಾಸ್ತವವಾಗಿ ಅದರಲ್ಲಿ ಪುರುಷ ಸ್ವಾರ್ಥ ಮತ್ತು ಹಿತಾಸಕ್ತಿಗಳಡಗಿವೆ. ಸ್ತ್ರೀ ಮತ್ತು ಶೂದ್ರರು ಸಮಾನರೆಂದು ಹೇಳುತ್ತಲೇ ದ್ವಂದ್ವತೆಯನ್ನು ಸೃಷ್ಟಿಸಿದ. ಶೂದ್ರ ಸಮಾನಳಾದ ಸ್ತ್ರೀ ಅದು ಹೇಗೆ ಪೂಜನೀಯಳಾಗಿರಲು ಸಾಧ್ಯ? ಅಷ್ಟೇ ಅಲ್ಲ, ಅವಳು ಬದುಕಿನುದ್ದಕ್ಕೂ ಪರಾಧೀನತೆಯಲ್ಲಿರುವಂತೆ ಕಾನೂನು ಮಾಡಿಟ್ಟ.

"ಪಿತಾರಕ್ಷತಿ ಕೌಮಾರ್ಯೆ ಭರ್ತಾರಕ್ಷತಿ ಯೌವನೇ

ಸ್ಥವಿರೇ ರಕ್ಷತಿ ಪುತ್ರಾ: ನಸ್ತ್ರೀ ಸ್ವಾತಂತ್ರ್ಯ ಮರ್ಹತಿ"[1]

ಹೀಗೆ ಹೆಣ್ಣು ಪುರುಷಾಧೀನದಲ್ಲಿಯೇ ಇರುವುದು ಅವಳಿಗೆ ಕ್ಷೇಮಕರವೆಂದು ಹೇಳುತ್ತ ಅವಳ ಸ್ವಾತಂತ್ರ್ಯವನ್ನು ಕಿತ್ತುಕೊಂಡ ಸ್ವಾತಂತ್ರ್ಯಕ್ಕೆ ಯೋಗ್ಯಳಲ್ಲದ ಹೆಣ್ಣು ಆಸ್ತಿ. ಅಲಂಕಾರದ ಪಟ್ಟಿಯಲ್ಲಿ ಸೇರಿಹೋದಳು. ಮುಂದೆ ಇದು ಸಾಮಾಜಿಕವಾಗಿಯೇ ರೂಢಿಗತವಾಗಿ ಸಹಜ ಸ್ಥಿತಿಯೆನಿಸಿಕೊಂಡಿತು. ಹೆಣ್ಣು ಅಬಲೆ ದೈಹಿಕವಾಗಿ ಪುರುಷನಿಗಿಂತ ದುರ್ಬಲಳು. ಹಾಗಾಗಿ ಭಾರತೀಯ ಧಾರ್ಮಿಕ ನಂಬಿಕೆ ಪುರುಷನ ರಕ್ಷಣೆಯಲ್ಲಿರಬೇಕು ಎನ್ನುತ್ತದೆ. ಇದು ಯಾವುದೇ ಕಾಲದಲ್ಲಿನ ಸಾಮರ್ಥ್ಯಗಳನ್ನು ತೋರಿಸಬಹುದೇ ವಿನಃ ಎಲ್ಲಾ ಕಾಲಕ್ಕೂ, ಜನಕ್ಕೂ ಅನ್ವಯವಾಗಲಾರದು.

ನಮ್ಮ ಇತಿಹಾಸದ ಪುಟಗಳನ್ನು ತೆರೆದು ನೋಡಿದರೆ ಯುದ್ಧ, ಹೋರಾಟ, ಶೌರ್ಯ, ಸಾಹಸಗಳೆಲ್ಲ ಗಂಡಸಿನ ಬದುಕಿನ ಕಕ್ಷೆಯಲ್ಲಿಯೇ ಗಿರಕಿ ಹೊಡೆಯುವ ಸಂಗತಿಗಳಾದರೆ ಹೆಣ್ಣು, ಆಕಳು, ಸಂಪತ್ತು ಭೂಮಿಗಳೆಲ್ಲ ಯುದ್ಧದ ಮೂಲಕ ಕಳೆದುಕೊಳ್ಳುವ ಮತ್ತು ಪಡೆದುಕೊಳ್ಳುವ ವಸ್ತುಗಳಾಗಿರುವಂತಹ ಉದಾಹರಣೆಗಳಿಗೆ ಕೊರತೆಯಿಲ್ಲ. ಹೆಣ್ಣು, ಹೊನ್ನು, ಮಣ್ಣು, ನಶ್ವರ

ಎಂದು ಹೇಳುತ್ತಲೇ ನಮ್ಮ ಸಂಪ್ರದಾಯ ಜೀವವಿರುವ ಹೆಣ್ಣನ್ನು ಜೀವವಿಲ್ಲದ ಮಣ್ಣಿಗೆ ಹೋಲಿಸುವುದು ದುರಂತವೇ ಆಗಿದೆ. ಮೇಲು ನೋಟಕ್ಕೆ ಹಾಗೆಯೇ ಮಹಿಳೆ ಒಪ್ಪಿ ನಡೆಯುತ್ತಾಳೆಂದು ಕಂಡರೂ ಅವಳ ಪ್ರತಿಕ್ರಿಯೆಯ ಮುಖ ಇದೊಂದೇ ಅಲ್ಲ, ಪುರುಷ ತನ್ನ ಬಗೆಗೆ ಅಧಿಕಾರಯುತವಾಗಿ ಹೇರುವ ನಿರ್ದೇಶನಗಳ ಬಗೆಗೂ ಅವಳು ಮೊದಲಿನಿಂದಲೂ ಪ್ರತಿಕ್ರಿಯಿಸುತ್ತಾ ಬಂದಿದ್ದಾಳೆ. ಇಂತಹ ಪ್ರತಿಕ್ರಿಯೆಯ ಅಂಶಗಳನ್ನು ಗೀತಾನಾಗಭೂಷಣರವರ ಕಾದಂಬರಿಗಳಲ್ಲಿ ಹೀಗೆ ಕಾಣಬಹುದಾಗಿದೆ.

**ಹಸಿಮಾಂಸ ಮತ್ತು ಹದ್ದುಗಳು:-**

ಹೆಣ್ಣನ್ನು ತನಗೆ ಬೇಕಾದ ವಸ್ತು ಎಂಬ ರೀತಿಯಲ್ಲಿ ಬಳಸಿಕೊಳ್ಳುವಂತಹ ಸಮಾಜ ಇದರಲ್ಲಿ ವ್ಯಕ್ತವಾಗಿದೆ. ಧಾರ್ಮಿಕ ವ್ಯವಸ್ಥೆ ಮತ್ತು ಆರ್ಥಿಕ ನೀತಿಗಳೆರಡೂ ಸಮಾಜ ವ್ಯವಸ್ಥೆಯಲ್ಲಿ ಹೆಣ್ಣು ಹೇಗಿರಬೇಕೆಂಬುದನ್ನು ರೂಪಿಸಿವೆ. ಇಂತಹ ಸಾಮಾಜಿಕ ವ್ಯವಸ್ಥೆಯನ್ನು ವೈಚಾರಿಕತೆಯುಳ್ಳ ಮನಸ್ಸುಗಳು ವಿರೋಧಿಸುವಂತದ್ದು ಇದೆ. ಪುರುಷ ಪ್ರಧಾನತೆಯ ಸಮಾಜ ಈ ಲೇಖಕಿಯ ಮೂರು ಕಾದಂಬರಿಗಳಲ್ಲೂ ಕಂಡುಬರುತ್ತದೆ.

ಹಣವಿಲ್ಲದವನ ಸ್ಥಿತಿಯಾವ ರೀತಿಯಲ್ಲಾದರೂ ಅಭಿವ್ಯಕ್ತವಾಗುತ್ತದೆ. ಅಕ್ಷರಸ್ಥನಲ್ಲದವನು ಸಮಾಜದಲ್ಲಿ ಮಾತನಾಡುವುದೇ ಒಂದು ಸಾಮಾಜಿಕ ಕ್ರಾಂತಿ. ಮಾತನಾಡಲು ಹೊರಟರೆ ಒಪ್ಪಿತವಾದ ಸಾಮಾಜಿಕ ಮೌಲ್ಯಗಳು ತಲ್ಲಣ. ಹಣ ಜಾತಿಯ ಶ್ರೇಷ್ಠತೆಯೇ ಪ್ರಧಾನ. ಎಲ್ಲರಿಗೂ ಇವರ ಮೌಲ್ಯಗಳೇ ಒಪ್ಪಿತವಾಗುತ್ತವೆ. ಇಂತಹವುಗಳ ಬಗ್ಗೆ ಮಾತನಾಡುವುದು ಇಲ್ಲವೇ ಮೌನಿಯಾಗಿರುವುದು ಪ್ರತಿಭಟನೆ[2] ಎನಿಸುತ್ತದೆ.

ಇಲ್ಲಿ ಹೆಣ್ಣು ಒಂದು ಆಟಿಕೆಯ ವಸ್ತುವಾಗಿರುವುದು ಹೆಣ್ಣಾಗಿರುವುದರಿಂದಲೇ ಮತ್ತು ಆರ್ಥಿಕತೆಯ ಕೊರತೆ ಇರುವುದರಿಂದಲೇ ಆಗಿದೆ. ನನಗೆ ಅನ್ನಿಸಿದ ಹಾಗೆ ಇಲ್ಲಿ ಇರುವಂತಹ ಸಾಮಾಜಿಕ ವ್ಯವಸ್ಥೆಗೆ ಮುಖಾಮುಖಿಯಾಗುವುದನ್ನು ಲಚ್ಚಿ ಮತ್ತು ಅವಳ ತಂದೆಯಾದಂತಹ ಫಕೀರಪ್ಪನ ಮಾತುಗಳಲ್ಲಿ ಗಮನಿಸಬಹುದು. ಇಲ್ಲಿ ಇರುವಂತಹ ಪುರುಷ ಪ್ರಧಾನತೆಯ ಸಮಾಜ ಹರೆಯದ ಹೆಣ್ಣು ಮಕ್ಕಳನ್ನು ಮನೆಯಲ್ಲಿಟ್ಟುಕೊಳ್ಳೋದು ಅಂದ್ರೆ ಹದ್ದುಗಳ ಕಣ್ಣಲ್ಲಿಂದ ಕೋಳಿಮರಿಯನ್ನು ಕಾಯೋ ಹಾಗೆ ಎಂದು ಹೇಳುವ ಫಕೀರಪ್ಪನ ಮಾತಿನ ಹಿನ್ನೆಲೆಯಲ್ಲಿ ಸಮಾಜ ಹಾಕಿರುವಂತಹ ನೀತಿ ನಿಯಮಗಳು ತಿಳಿಯುತ್ತವೆ. ಅಲ್ಲದೆ ಲಚ್ಚಿಯ ಅವ್ವ ಸತ್ತಾಗ ಪಾಪ ಮುದುಕಿ ಗಂಡು ಮಗನ ಹಡೀಲಿಲ್ಲ ಸೊಸೆ ಕರಸ್ಗೊಲಿಲ್ಲ ಮಗಳಿಗೆ ಮದಿಮಾಡಿಕೊಟ್ಟು

ಅಳ್ಯಾನ ಮಾರಿ ನೋಡ್ಲಿಲ್ಲ ಇದೇ ಚಿಂತ್ಯಾಗೆ ಸುಟ್ಟು ಸುಣ್ಣ ಆಗಿತ್ತು. ಹೆಣ್ಣು ಜೀವ ಹೇಳಿ ಕೇಳಿ ಏಟಂತ ತಾಳಿತು ಇವತ್ ಗುಟುಕ್ ಅಂತು. ಲಚ್ಚಿ ಪರದೇಶಿ ಆಯ್ತು ಎಂದು ಹೇಳುವ ಶೇಕವ್ವನ ಸಂತಾಪದ ಮಾತುಗಳಲ್ಲಿ ಹೆಣ್ಣಿಗೆ ತಾಯಿಯ ಪ್ರಾಮುಖ್ಯ ಎಷ್ಟು ಎಂಬುದು ಒಂದು ಕಡೆಯಾದರೆ ಗಂಡು ಮಗು ಆಗದೇನೆ ಸತ್ತಳು ಎಂದು ಹೇಳುವಂತಹ ಪುರುಷಪ್ರಧಾನ ಸಮಾಜ ಮತ್ತೊಂದು ಕಡೆ ಇದೆ.

ಲಚ್ಚಿ ಹೆಣ್ಣಾಗಿರುವುದರಿಂದ ಮತ್ತು ಅದರಲ್ಲೂ ಕೀಳು ಜಾತಿಯವಳಾಗಿರುವುದರಿಂದ ಸಾಮಾಜಿಕ ನಿಯಮಗಳು ಆಕೆಯ ತಲೆಯ ಮೇಲೇರಿದರೆ ಫಕೀರಪ್ಪನಿಗೆ ಹೀನ ಕುಲದವನೆಂಬುದರಿಂದ ಸಾಮಾಜಿಕ ನಿಯಮಗಳು ನಿರ್ಬಂಧಿಸಿವೆ. ಆದರೂ ಅವನು ನೇರವಾಗಿ ಅದಕ್ಕೆ ಮುಖಾಮುಖಿಯಾಗದಿದ್ದರೂ ಅಂತಹ ಮುಖಾಮುಖಿಯಾಗುವಂತಹ ಮನಸ್ಸು ಫಕೀರಪ್ಪನಿಗಿದೆ ಎಂದೇ ಹೇಳಬಹುದು. ಫಕೀರಪ್ಪ ಮದುವೆಯಾದ ಹೊಸದರಲ್ಲಿ ಹೆಂಡತಿಯನ್ನು ಮೊದಲದಿನ ಕುಲಕರ್ಣಿಗೆ ಕೊಡಬೇಕು ಎಂಬಂತಹ ಹಳ್ಳಿಯ ರೀತಿರಿವಾಜುಗಳನ್ನು, ಸಾಮಾಜಿಕ ನಿಯಮಗಳನ್ನು ಮೀರುತ್ತಾನೆ. ಕುಲಕರ್ಣಿ ಕೇಳಿದಾಗ ಆತನ ಎದುರು ಇನ್ನೂ ಮೈನೆರೆದಿಲ್ಲ ಎನ್ನುವಂತಹ ಫಕೀರಪ್ಪ ನಿನ್ನ ಹೆಂಡತಿಯನ್ನು ನನ್ನ ಮಗ್ಗುಲಿಗೆ ಕಳಿಸು ಎಂದು ಹೇಳುವ ಕೋಪವಿದ್ದರೂ ಸಹ ಹೇಳಲಾರ,ಆದರೆ ಮನಸ್ಸಿನಲ್ಲಿ ಮಾತ್ರ ಹೇಳುವ, ಎದುರಿಸುವ ಧೈರ್ಯವಿದೆ.

ಇಲ್ಲಿ ಇರುವಂತಹ ಸಾಮಾಜಿಕ ವ್ಯವಸ್ಥೆಯನ್ನು ಕುಲಕರ್ಣಿಯ ಮಾತುಗಳಿಂದಲೇ ತಿಳಿಯಬಹುದು. "ಏ ಹಾದರಕ ಹುಟ್ಟಿದವ್ನೇ...ನಿನ್ ಹೆಣ್ತಿಗಿ ಕರ್ಕೊಂಡು ಬಾರ್ಲೆ.......ಗೌಡಕುಲಕರ್ಣೇರು ರುಚಿ ನೋಡ್ದ ಮ್ಯಾಲೇ ನೀ ಸೋಬಾನ ಮಾಡ್ಕೋಮಾದು. ಇದು ಈ ಹಳ್ಳಿ ರೀತಿರಿವಾಜ ಅಂತ ಗೊತ್ತಿಲ್ಲೇನೋ ಸೂಳ್ಯಾ ಮಗನೇ"[3] ಅಂದರೆ ತನ್ನ ಬಡತನಕ್ಕಾಗಿ, ಆರ್ಥಿಕ ಪರಿಸ್ಥಿತಿಗಾಗಿ ತನ್ನ ಹೆಂಡತಿಯ ಶೀಲವನ್ನಾದರೂ ಒತ್ತೆಯಿಡಬೇಕೆಂದು ಹೇಳುತ್ತದೆ. ಈ ಹಿನ್ನಲೆಯಲ್ಲಿ ಸಮಾಜದ ಪರಿಚಯವನ್ನು ಜನರಿಗೆ ಈ ಕಾದಂಬರಿ ಮಾಡಿಕೊಡುತ್ತದೆ. ಅಂದರೆ ಉಳ್ಳವರು, ಪ್ರತಿಷ್ಠಿತ ವ್ಯಕ್ತಿಗಳು ತಮಗೆ ಅನುಕೂಲವಾಗುವ ಹಾಗೆ ನಿಯಮಗಳನ್ನು ರೂಪಿಸಿಕೊಂಡಿದ್ದರು ಎಂದು ಹೇಳಬಹುದು. ಇಂತಹ ಮಾತನ್ನು ಕೇಳಿದ ಫಕೀರಪ್ಪ ನಿನ್ನ ಹೆಂಡತಿಗೆ ನನ್ನ ಮಗ್ಗುಲಲ್ಲಿ ಕಳಿಸು ಎನ್ನುವ ಹಾರುವವನ ಹೆಡಕಿಗೆ ಕೊಡಲಿ ಹಾಕುವಷ್ಟು ಸಿಟ್ಟು ಬಂದರೂ ಕುಲಕರ್ಣಿ ಹೇಳಿದ ಮಾತಿಗೆ ತಲೆದೂಗಿದ. ಮನೆಯ ಹಾದಿ ಬಿಟ್ಟು ಬನದ ಹಾದಿ ಹಿಡಿದ ಫಕೀರಪ್ಪನ ತಲೆಯಲ್ಲಿ ಬೆಂಕಿ ಧಗಧಗಿಸುತ್ತಿತ್ತು. ಎದೆಯಲ್ಲಿ ಸಿಟ್ಟಿನ ಗೆಜ್ಜೆ ಕುಣಿತ, ಕೈಗೆ ಸಿಕ್ಕ ಲಕ್ಕಿ ಮಳೆಯನ್ನು ಕಿತ್ತುಕೊಂಡು ದಾರಿಯಲ್ಲಿ ಬಿದ್ದಕಲ್ಲುಗಳಿಗೆ ಹುಚ್ಚನಂತೆ

ಒಂದೇ ಸಮನೆಹೊಡೆದ, ಬಯ್ದ, ಅದರ ಮೇಲೆ ಉಗುಳಿದ. ಕುಸಿದು ಬಿದ್ದು ಹೆಂಗಸರಂತೆ ದನಿ ತೆಗೆದು ಅತ್ತುಬಿಟ್ಟ. ಇಲ್ಲಿ ಅಳುವೇ ಪ್ರತಿಭಟನೆಯಾಗಿ, ಅಸಹಾಯಕತೆಯೇ ಉತ್ತರವಾಗಿದೆ. ಇಂತಹ ಅಸಹಾಯಕತೆಯಿರುವಂತಹದ್ದನ್ನು ದೇವನೂರ ಮಹಾದೇವರ 'ಮಾರಿಕೊಂಡವರು ಕತೆ'ಯಲ್ಲಿ ಹೇಳುವ ಬೀರನ ಮಾತುಗಳಿಂದ ತಿಳಿಯಬಹುದು. ಕಿಟ್ಟಪ್ಪ ಕೊಟ್ಟಂತಹ ರಗ್ಗು ಲಚಮೀನ ಹೊದ್ದುಕೊಂಡಿದೆ. ಕಿಟ್ಟಪ್ಪ ಕಟ್ಟಿಸಿರುವ ಮನೆ ನಮ್ಮಿಬ್ಬರನ್ನು ಕವಿಚಿಕೊಂಡಿದೆ ಎಂದು. ಕುಲಕರ್ಣಿಯ ಮಾತುಗಳನ್ನು ಕೇಳಿ ಕೋಪದಿಂದ ಬರುತ್ತಿರುವ ಫಕೀರಪ್ಪ ಮೌನಿಯಾದುದಾದರೂ ಯಾವಗೆಂದರೆ ಕುಲಕರ್ಣಿಯ ಹೆಂಡತಿ ಹೀರಾಬಾಯಿ ಮತ್ತು ಆತನ ಆಳುಮಗನೇ ಆದಂತಹ ಕಾಳ್ಯಾರಿಬ್ಬರ ಸಂಬಂಧದ ದೃಶ್ಯವನ್ನು ನೋಡಿಯೇ ಯಾಕೆಂದರೆ ತನ್ನ ಜಾತಿ ಹೆಂಗಸರನ್ನು ಕೇಳುವಂತಹ, ಕುಲಕರ್ಣಿಯ ಹೆಂಡತಿಯೊಂದಿಗೆ ನನ್ನ ಜಾತಿಯವನಾದ ಕಾಳ್ಯಾ ಈ ರೀತಿ ಇದ್ದಾನೆ ಎಂಬಂತಹ ಮನಸ್ಸಿನ ಮುಖಾಮುಖಿಯಾಗಿದೆ.

ನಂತರ ಸಿಂದಿಕೊಡುವ ಭೀಮಯ್ಯನ ಹತ್ತಿರ ಹೋಗಿ ಫಕೀರಪ್ಪ ಆಡುವ ಮಾತುಗಳನ್ನು ಕೇಳಬೇಕು. "ನೀ ಅನ್ನಾದೂ ಖರೇ ಅದಾನೋ ತಮ್ಮಾ ಆದರ ನಿಮ್ ಹಿಂದಿನ ಹಿರ್‍ಯಾರೆಲ್ಲ ಇದೆಲ್ಲದಕ ಒಪಗೊಂಡು ಮಾಡ್ಕೋತೇ ಬಂದಾರಲ್ಲಪಾ....ಎಂದ ಭೀಮಯ್ಯನ ಮಾತಿಗೆ ಕೊಡುವ ಫಕೀರಪ್ಪನ ಉತ್ತರ ಏನೆಂದರೆ "ಅದಕೇ ಮತ್ತ ಈ ಮಕ್ಳು ಸೊಕ್ಕಿಗೇರ್‍ಯಾರೋ ಕಾಕೋ.....ನಮ್ಮೆಂಡ್ರಿಗಿ ಅವರ ಟೊಂಕದ ತೆಳಕ ಹಾಯ್ಕೋತ ನಾವು ಅವರ ಹೆಂಡ್ರಕಾಲ ಪಾದಾ, ತೊಳಕೋತ ಆಳ ಮಕ್ಳಾಗಿ ದುಡ್ಲಿಕ್ಕತ್ತಿವೆಲಾ....ಅದೆಲ್ಲಾ ನನ್ ಮುಂದ ನಡೆಂಗಿಲ್ಲ. ಭೋಸಡಿಮಕ್ಳು ಅವು ನಮ್ಮೆಂಡ್ರಿಗಿ ಬೇಡದ್ರ ನಾವೂನೂ ಅವರ ಹೆಂಡ್ರಿಗಿ ಬೇಡಬೇಕೋ, ಇದರಾಗೇನು ತೆಪ್ಪಯ್ತಿ, ನನ್ ಹೆಂಡ್ತಿ ಅವನ ಮಗ್ಗಲ ಬಿಸಿ ಮಾಡ್ಬೇಕಂದ್ರ ಅವನ್ ಹೆಣ್ತಿನೂ ನನ್ ಮಗ್ಗಲದಾ ನೆಳ್ಳಲಿ, ಹೊಯಿಂದೋ ಇಲ್ಲೋ ಖರೇ ಹೇಳು." ಎಂದ ಫಕೀರಪ್ಪನ ಪ್ರತಿರೋಧದ ಮಾತಿಗೆ ಭೀಮಯ್ಯನ ಉತ್ತರವಾದರೂ ಏನೆಂದರೇ "ಅದೆಲ್ಲಾ ಖರೇ ಅದಾನಪ್ಪಾ...... ಆದರ ನಿಮ್ಮ ದಾನ ಹರ್‍ಯಾದ ಪಾರಗೋಳೆಲ್ಲ ನಿನ್ ಬೆನ್ನಿಗೆ ನಿಂದರಬೇಕು ನೋಡು. ನೀನ್ ಒಬ್ಬವನಿಂದ ಏನೂ ಸಾಧ್ಯಾ ಅಗಾಣಿಲ್ಲ."[4] ಎನ್ನುತ್ತಾನೆ. ಪ್ರತಿಭಟನೆಯನ್ನು, ಪ್ರತಿರೋಧವನ್ನು ನಡೆಸಲು ಆಗದಿರುವುದಕ್ಕೆ ಕಾರಣವೇನೆಂದರೆ ಸಂಘಟನೆಯ ಶಕ್ತಿಯ ಕೊರತೆಯೇ ಆಗಿದೆ.

ಕುಲಕರ್ಣಿಯ ಕೋಣ ಸತ್ತಿದೆ ಎಂದು ಕಾಶಪ್ಪನಿಂದ ಸುದ್ಧಿ ತಿಳಿದ ಮುದುಕ ಹೇಳುವಂತಹ ಮತುಗಳಲ್ಲಿಯೂ ಮೇಲ್ವರ್ಗಕ್ಕೆ ಪ್ರತಿರೋಧ ಒಡ್ಡುವ ಮನಸ್ಸಿದೆ. "ಕುಲಕರ್ಣಿಯ ಕ್ವಾಣಾ ಸತ್ತಾದೇ ಆದರೆ ಆವುದರ ಬೆದಿ ಸಾಯಂಗಿಲ್ಲ ನೋಡು." ಇಲ್ಲಿ ಸಮಾಜ ಹಾಕಿದಂತಹ

ನಿಯಮಗಳನ್ನು ಮೀರದಂತೆ ಮುದುಕ ನಡೆದುಕೊಂಡು ಬಂದಿದ್ದರೂ ತಲೆಮಾರುಗಳಿಂದಲೂ ಅನುಭವಿಸಿರುವಂತಹ ನೋವಿನಿಂದಾಗಿ ಇರುವ ವ್ಯವಸ್ಥೆಯ ಬಗ್ಗೆ ಪ್ರತಿರೋಧವಿರುವುದನ್ನು ಗುರುತಿಸಬಹುದು. ಹೇಗೆಂದರೆ ಇಂತಹ ಮಾತುಗಳಿಂದಾಗಿಯೇ.

"ತಗಂಬರ್‍ರಿ....ತಗಂಬರ್‍ರಿ....ತಿನ್ರಿ.....ತಿನ್ರೋ....ಅವರ ಸತ್ತ ದನಗೋಳ ಖಂಡಾ ತಿಲ್ಲಿಕ್ಕೇ ಹುಟ್ಟಿದವ್ರುನಾವು.... ಅಲ್ಲೋ ತಾಯಗ್ಗಂಡ್ರೇ ಆ ಕುಲಕಣ್ಣಿ ಗೋಡಿಗೋಳ ಖಂಡಾನೇ ತಿನ್ರೋ.....ಅದು ಹರಕೊಂಡು ತಿಲ್ಲಕ ನಿಮ್ಮ ಹಲ್ಲಗೋಳದಾಗ ಸಗತಿ ಇಲ್ಲೋ್ರ...ಅವ್ರು ರಂಡಿ ಮಕ್ಳು ತಮ್ಮ ಖಂಡಾತಿನ ಗುಡಸಲಾರ್ದ್ಹಂಗ ನಿಮ್ ಹಲ್ಲಿನ ಬೇರೆ ಕಿತ್ತ್ಯಾರ... ಬೇರೇ ಕಿತ್ಯಾರ."[5] ಪ್ರತ್ಯಕ್ಷವಾಗಲ್ಲದಿದ್ದರೂ ಪರೋಕ್ಷವಾಗಿಯೇ ತಮ್ಮ ನೋವನ್ನು ತೋಡಿಕೊಳ್ಳುವ ಮಾತುಗಳಿವೆ.

ಲಚ್ಚಿಯ ಪಾತ್ರವೇ ಕಾದಂಬರಿಯುದ್ಧಕ್ಕೂ ಮನಸೆಳೆಯುವುದು. ತನ್ನ ತಾಯಿ-ತಂದೆ ಸತ್ತ ನಂತರ ಪ್ರಿಯತಮನಾದ ಕಾಸೀನಾಥಕೊಟ್ಟ ಕುಂಬಳ ಕಾಯಿಯನ್ನು ತರುತ್ತಿರುತ್ತಾಳೆ ಕೂಲಿ ಮಾಡಿಯೂ ತಿನ್ನಲಾರದ ಸ್ಥಿತಿ. ಬರಗಾಲದ ಭೀಕರತೆಯಿಂದಾಗಿ ಇದನ್ನು ನೋಡಿದಂತ ಕುಲಕಣ್ಣಿ ಇವತ್ತು ತೋಟದ ಮನೆಗೆ ಬಾ ಎಂದು ಕರೆಯುತ್ತಾನೆ. ಈ ಮಾತಿಗೆ ಲಚ್ಚಿಯ ಉತ್ತರ "ದೂರ ನಿಂತು ಮಾತಾಡೋ ಕುಲಕಣ್ಣಿ, ನೀದವುಳ್ಳಂವಾ ಇದ್ದರ ನಿನ್ ಮನಿಗಿ ಇದ್ದೀ ನನಗೇನು, ರಟ್ಟಿಗಿಟ್ಟಿ ಹಿಡಿದವರ ಬಿಡಸಗೊಂಡು ಹ್ವಾದಿ ಖಬರದಾಗ ಖಬರಗೇಡೀ..." "ಬಾಯಿ ತೊಳಕೊಂಡು ಮಾತಾಡೋ....ನಾಯೇನು ಬೀದಿ ಸೂಳೆಂತ ತಿಳ್ಕೋಂಡೇನು? ರಂಡಿನಿಂಡಿ ಅಂದ್ರ ನೆಟ್ಟಗಾಗಲ್ಲ ನೋಡು, ನಿನ್ ಹೆಣ್ತಿ ಆದಾಳು ರಂಡಿ ಹಾಂ"[6] ಎನ್ನುತ್ತಾಳೆ ಸಮಾಜದ ಪ್ರತಿಷ್ಠಿತ ವ್ಯಕ್ತಿಯಾದ ಕುಲಕಣ್ಣಿಗೆ ಎದುರತ್ತರಕೊಡುವ ಮನಸ್ಸು ಲಚ್ಚಿಗಿದೆ. ಲಚ್ಚಿಯನ್ನು ಕರೆದೊಯ್ಯಲು ಪೋಲೀಸಿನವರು ಬರುತ್ತಾರೆ. ಅವರಾಡುವ ಮಾತುಗಳಾದರೂ ಯಾವುದು ಸಮಾಜದಲ್ಲಿ ರಕ್ಷಣೆಗೆಂದು ಇರುವಂತಹ ವ್ಯವಸ್ಥೆ ಭಕ್ಷಕನಾಗುತ್ತಿದೆ. "ಯಾಕ್ಲೇ ಭೋಸುಡಿ, ಕುಲಕಣ್ಣಿ ಮಗ್ಗಲಮೆ ಸೋನಾ ನಹಿ ಮಾಂಗ ತಾಕ್ಯಾ.... ಚಲೋ ಸ್ಟೇಶನಕೋ"[7] ಎಂದು ಉಳ್ಳವನ ಪರವಾಗಿಯೇ ವಾದಿಸುತ್ತಿದ್ದಾನೆ. ಪೋಲೀಸರು ತಮ್ಮ ಶಬ್ಧಕೋಶದಲ್ಲಿ ಹೆಣ್ಣುಗಳಿಗೆ ಬೈಯುವ ಎಲ್ಲಾ ಪದಗಳನ್ನು ಬೈದರೂ ಲಚ್ಚಿ ತಾನು ಕಳ್ಳತನ ಮಾಡಿದ್ದೇನೆಂದು ಒಪ್ಪಿಕೊಳ್ಳಲಿಲ್ಲ ಏಕೆಂದರೆ ಇದು ಕಳ್ಳತನವೇ ಅಲ್ಲ ಎಂದು ವ್ಯವಸ್ಥೆಯ ವಿರುದ್ಧ ಪ್ರತಿಭಟಿಸುತ್ತಾಳೆ. ಇಂತಹ ಮಾತನ್ನು 'ಕುಸುಮ ಬಾಲೆ' ಕಾದಂಬರಿಯಲ್ಲಿ ಎಳೆನೀರು ಕದ್ದದ್ದು ಮಾರಲು ಅಲ್ಲ ಹೊಟ್ಟೆಹಸಿವಿನಿಂದಾಗಿ ಎಂದು ಹೇಳುವ ಗಾರಸಿದ್ದಾ್ಮವನ ಮಾತುಗಳನ್ನು ಗಮನಿಸಬೇಕು.

ರಕ್ಷಣೆಯ ಹೆಸರಿನಲ್ಲಿ ಇರುವಂತಹ ಪೋಲೀಸಿನ ವ್ಯವಸ್ಥೆಯಾದರೂ ಹೇಗಿದೆ ಎಂದರೆ ಗಂಡು ಅಪರಾಧಿಗಳ ಕಣ್ಣಲ್ಲಿ ಕಾರ ತುಂಬಿದರು. ಮತ್ತೊಬ್ಬನ ಮೈಮೇಲೆ ರಕ್ತ ಸುರಿಯುವಂತೆ ಹೊಡೆದು ಉಪ್ಪು ಸವರಿದರು. ಇನ್ನೊಬ್ಬನ ಕಾಲುಗಳಿಗೆ ಕಬ್ಬಿಣದ ಸರಪಳಿಗಳಿಂದ ಬಿಗಿದು ಮುಖಕ್ಕೆ ಮೆಣಸಿನ ನೀರೆರಚಿದರು. ಗಂಡಿಗೆ ಇಷ್ಟಾದರೆ ಇನ್ನು ಹೆಣ್ಣಿಗೆ ಕೇಳಬೇಕೆ? ಲಚ್ಚಿಯ ಅತ್ಯಾಚಾರವು ಆಯಿತು. ಇಂತಹ ನರಕ ಯಾತನೆಯಲ್ಲಿ ಕೋರ್ಟಿನ ಕಟಕಟೆಯಲ್ಲಿ ನಿಂತ ಲಚ್ಚಿಯ ಮಾತುಗಳಾದರೂ ಏನು? ವಕೀಲರು ಕೇಳಿದ ಪ್ರಶ್ನೆಗಳಿಗೆಲ್ಲ ಅವಳದು ಬರೀ ಮೌನದ ಉತ್ತರ, ಕಣ್ಣೀರಿನ ಮಾತು. ಶೂನ್ಯ ನೋಟದ ವಿವರಣೆಯೇ ಆಗಿದೆ. ಇಲ್ಲಿ ಬಡತನ ಮೊದಲು, ಹೆಣ್ಣಿನ ಪ್ರಶ್ನೆ ಆನಂತರ ಎಂಬುದಿಲ್ಲ ಎರಡೂ ಸಹ ಒಂದನ್ನು ಬಿಟ್ಟು ಒಂದಿಲ್ಲ. ಲಚ್ಚಿಯ ಈ ಮೌನವೇ ವ್ಯವಸ್ಥೆಯನ್ನು ಮೀರುವ ಉತ್ತರವೂ ಆಗುತ್ತಿದೆ. ಅವಳಿಗೆ ಶಿಕ್ಷೆಯು ಅಲ್ಲದೆ 20 ರೂ ದಂಡ ಬೇರೆ ಕೊಡಬೇಕು. ನಿಜವಾದ ಅಪರಾಧಿ ಲಚ್ಚಿಯೋ ಕಾಸೀನಾಥನೋ? ಕಾಶೀನಾಥ ತಪ್ಪು ಮಾಡಿದರೂ ಅವನನ್ನು ಬಿಟ್ಟುಕೊಡುತ್ತಿಲ್ಲ ಕುಲಕರ್ಣಿ. ಏಕೆಂದರೆ ಅವನ ಮನೆ, ತೋಟದ ಕೆಲಸ ಮಾಡುವವನು ಕಾಶೀನಾಥನೇ ಆಗಿದ್ದಾನೆ. ಅಲ್ಲದೇ ಕೆಳಜಾತಿಯವನಾದರೂ ಆತನೂ ಪುರುಷನಲ್ಲವೇ?

ಲಚ್ಚಿ ಕಾಶೀನಾಥನ ಮದುವೆಯ ಪ್ರಸ್ತಾಪದಲ್ಲಿ ಹೀಗೆಳುತ್ತಾಳೆ. ಫಕೀರಪ್ಪನಿಗೆ ವಯಸ್ಸಾಗುತ್ತಿದೆ ಆತ ಸಾಯೋವರೆಗೂ ಹೀಗೆಯೇ ಇರೋದು ಆ ಮೇಲೆ ಮದುವೆ ಆಗೋಣ. “ಹೂಂ... ಹಾಂಗೆತ ನಮ್ ಹಿಂದೂ ಮಂದ್ಯಾಗ ಸೇರಿಸಗೋತಾರಂತ... ಇಲ್ಲೋ ಗೊತ್ತಿಲಲ್ಲ, ಕಿರಿಸ್ತಾಯ್ರ, ತುರುಕರು, ಸೇರಿಸಗೋತಾರಂತ... ಅದೆಲ್ಲ ಬ್ಯಾಡ ಕಾಸಿ... ನಾವು ಹಿಂಗೇ ಹಿನಾ ತ್ವಾಡೆ ದಿನಾ ಸಮಕ್ಕಿದ್ರಾಯ್ತು ಅನಸ್ತಾದ ನನಗೆರೆ”[8] ಎಂದು ಹೇಳುವ ಲಚ್ಚಿಯ ಮಾತುಗಳಿಗೆ ಆಕೆಯನ್ನು ಅತ್ಯಾಚಾರ ಮಾಡಿದ್ದಾರೆ ಎಂಬ ಸುದ್ಧಿ ತಿಳಿದ ಕಾಸೀನಾಥನ ಪ್ರತಿಕ್ರಿಯೆಯಾದರೂ ಏನು? ಅವನು ಬೇರೆಯವಳನ್ನು ಮದುವೆಯಾಗಿ ಲಚ್ಚಿಯನ್ನು ಮರೆತಿರುವುದೇ? ಹೆಣ್ಣು ತಾನು ಹೆಣ್ಣು ಎಂಬುದರಿಂದಲೇ ಸಾಮಾಜಿಕ ವ್ಯವಸ್ಥೆ ಮತ್ತು ತನ್ನ ಜಾತಿ ಈ ರೀತಿ ವರ್ತಿಸುತ್ತಿದೆ. ಪ್ರಧಾನ ಮತ್ತು ಅಧೀನ ಜಾತಿ, ವರ್ಗಗಳು ಎಂದು ಗುರುತಿಸಲ್ಪಡುವಂತಹ ತನ್ನ ವರ್ಗದಿಂದಲೂ ಹೆಣ್ಣು ಆಟಿಕೆಯ ವಸ್ತುವಾಗಿದ್ದಾಳೆ. ಈ ಕಾದಂಬರಿಯನ್ನು ಕುರಿತು ವಿಜಯಾದಬ್ಬೆರವರು ಹೇಳುವ ಮಾತುಗಳನ್ನು ಕೇಳಬೇಕು. ‘ಹಸಿಮಾಂಸ ಮತ್ತು ಹದ್ದುಗಳು’ ಕೃತಿಯಲ್ಲಿ ಗಂಡು ಮಗುವನ್ನು ಕೊಂದು ಕೋರ್ಟಿನಲ್ಲಿ ನಿಂತ ಹೆಂಗಸನ್ನು ನಾನು ಬೆರಗಿನಿಂದ ನೋಡುತ್ತಾ ನಿಂತಿದ್ದರೆ ಮತ್ತೊಬ್ಬ ಪುರುಷ ವಿಮರ್ಶಕರು ಅದರ ಭಾಷೆಯ ಸೊಗಡನ್ನು

ನೋಡುತ್ತಿದ್ದರು."[9] ಎಂಬ ಮಾತಿನಲ್ಲಿಯೇ ವ್ಯಕ್ತವಾಗಿದೆ, ಪುರುಷತ್ವ ಎಂಬುದಕ್ಕೆ ಯಾವುದು ಮುಖ್ಯ ಎಂದು. ಈ ಕಾದಂಬರಿಯಲ್ಲಿ ವಿಧಿಯ ಕೈವಾಡ ಎಂಬಂತೆ ಲಚ್ಚಿ ಪೋಲೀಸ್ ಸ್ಟೇಷನ್ ಅನ್ನು ಬಿಟ್ಟು ಅವಳು ಹೋಗುವಂತಹ ಸ್ತ್ರೀ ನಿಕೇತನ ಅಲ್ಲಿಂದ ಬಸ್ಸೆಣ್ಣಿಯನ್ನು ಮದುವೆಯಾಗಿ ಹೋಗುವುದು ಅಲ್ಲಿ ಅವನು ಕೊಡುವ ಶಿಕ್ಷೆಯನ್ನು ಅನುಭವಿಸಿ ಜೈಲಿನಿಂದ ಬಂದವಳೆಂದು ಮನೆಯಿಂದ ಹೊರಗಡೆಗೆ ತಳ್ಳುವುದು ನಂತರ ತನಗಾದ ಗಂಡುಮಗುವನ್ನು ಸಾಯಿಸಿ ತಾನೂ ಸಾಯಲೋಗುವಂತಹ ಪರಿಸ್ಥಿತಿಯನ್ನು ತಲುಪುವುದು ಅಸಹಾಯಕತೆಯ ಜೊತೆ ಪ್ರತಿಭಟನೆಯೇ ಆಗಿದೆ. ಒಟ್ಟಾರೆಯಾಗಿ ಸಮಾಜ ಹೆಣ್ಣನ್ನು ನಡೆಸಿಕೊಳ್ಳುವಂತಹ ರೀತಿನೀತಿಗಳೇ ಸಾವಿನ ಸ್ಥಿತಿ ತಲುಪಲು ಸಾಕ್ಷಿಯಾಗಿದ್ದು ಹೆಣ್ಣಿನ ದೇಹದಾಚೆಗಿನ ವ್ಯಕ್ತಿತ್ವವನ್ನೇ ಪುರುಷ ಪ್ರಧಾನ ಸಮಾಜ ಮರೆತಿದೆ. ಇಂತಹ ಎಲ್ಲದಕ್ಕೂ ಹೆಣ್ಣಿನ ಪ್ರತಿಕ್ರಿಯೆ ಮಾತು, ಮೌನ, ಅಳುವೇ ಆಗಿದ್ದು, ಗಂಡನ್ನೇ ತಿರಸ್ಕರಿಸುವಂತಹ ಮಟ್ಟದಲ್ಲಿ ಈ ಕಾದಂಬರಿ ಕೊನೆಯಾಗುತ್ತದೆ. ಏಕೆಂದರೆ ಆ ಮಗುವಿನಿಂದಾಗಿ ತನ್ನಂತಹ ಹೆಣ್ಣಿನ ಬಾಳು ಹೀಗಾಗಬಾರದಲ್ಲ ಎಂಬ ಲಚ್ಚಿಯ ಮನಸ್ಸು. ಆ ಮನಸ್ಸಿಗೆ ಕಾರಣ ಪುರುಷ ಪ್ರಧಾನ ವ್ಯವಸ್ಥೆಯ ಮೌಲ್ಯಗಳೇ ಆಗಿವೆ. ಹೆಣ್ಣನ್ನು ದೈಹಿಕನೆಲೆಯಲ್ಲೇ ಗುರುತಿಸುವಂತಹ ಈ ಸಮಾಜಕ್ಕೆ ಆಕೆಯ ಬೌದ್ಧಿಕತೆಯ ವ್ಯಕ್ತಿತ್ವವನ್ನು ಗುರುತಿಸುವಂತಹ ಮನೋಭಾವವೇ ಇಲ್ಲ. ಇಂತಹುದೇ ವಸ್ತುವನ್ನೊಳಗೊಂಡ ನಿರಂಜನರ 'ಕೊನೆಯ ಗಿರಾಕಿ' ಕಥೆಯಲ್ಲೂ ಹೆಣ್ಣು ಹಸಿಮಂಸವಾಗಿಯೇ ಪುರುಷನಿಗೆ ಬಲಿಯಾಗಿ ಹದ್ದೇ ಆಕೆಯ ಕೊನೆಯ ಗಿರಾಕಿಯೆಂಬಂತೆ ಚಿತ್ರಿಸಲಾಗಿದೆ. ಇಲ್ಲೂ ಸಹ ಊಳಿಗಮಾನ್ಯತೆ, ಪುರುಷಪ್ರಧಾನ್ಯತೆಯ ಕ್ರೌರ್ಯವೇ ಹೆಚ್ಚಾಗಿದೆ.

## ಆಸರೆಗಳು

ಈ ಕಾದಂಬರಿಯ ಮೊದಲಲ್ಲೆ ಸಾಮಾಜಿಕ ವ್ಯವಸ್ಥೆಯಲ್ಲಿ ಮೇಲ್ವರ್ಗಕ್ಕೆ ಕೆಳವರ್ಗ ಹೇಗೆ ರೂಢಿಗತವಾಗಿ ನಡೆದುಕೊಂಡು ಬಂದಿದೆ ಎಂಬುದನ್ನು ಗಮನಿಸಬಹುದು. ಮಾದರ ಕೇರಿಯಲ್ಲಿಯ ಮುಕ್ಕಾಲು ಮೂರು ಪಾಲು ಗುಡಿಸಲುಗಳಿಗೆಲ್ಲ, ಆಕಾಶದಲ್ಲಿ ಬೆಳ್ಳಿಚಿಕ್ಕಿ ಮೂಡಿದಾಗಲೇ ಬೆಳಗಾಗುತ್ತದೆ. ಗಂಡಸರು ಕೈಕಾಲು ಮುಖ ತೊಳೆದುಕೊಂಡು, ನ್ಯಾರಿ ಬುತ್ತಿ ಹೊತ್ತು ಹೆಗಲಮೇಲೆ ಕಂಬಳಿ ಹಾಕಿಕೊಂಡೇ ಗೌಡ, ಕುಲಕರ್ಣಿ, ಸಾಹುಕಾರರ ಎತ್ತುಗಳನ್ನು ಹೊಡೆದುಕೊಂಡು ಹೊಲಗಳಿಗೆ ನಡೆಯುತ್ತಾರೆ. ಹೆಂಗಸರು ಬೀಸುವುದಕ್ಕೆ, ರೊಟ್ಟಿಮಾಡುವುದಕ್ಕೆ, ಹೆಂಡೆಕಸ ಬಳಿಯುವುದಕ್ಕೆ ಅಂತ ದಿನನಿತ್ಯದ ಬೆಳಗಿನ ನೂರಾರು ಕೆಲಸಗಳಿಗೆ ತಮ್ಮನೇ ತೊಡಗಿಸಿಕೊಳ್ಳುತ್ತಾರೆ. ಇದು ನಿನ್ನೆ ಮೊನ್ನೆಯ ರೀತಿ ರಿವಾಜು ಅಲ್ಲ, ಮುತ್ತ್ಯಾ, ಅವನ ಮುತ್ತ್ಯಾ, ಅವನ ಮುತ್ತ್ಯಾ ಅಂತ ಈ ಪ್ರಪಂಚ ಹುಟ್ಟಿದಾಗಲೇ ಹುಟ್ಟಿ, ಅದರ ಜೊತೆಯಲ್ಲಿಯೇ

ಬೆಳೆದುಕೊಂಡು ಬಂದದ್ದು."[10] ಇಂತಹ ಸಮಾಜದಲ್ಲಿರುವ ಈ ಕಾದಂಬರಿಯ ಮುಖ್ಯವಾದ ಪಾತ್ರಗಳು ಎರಡು ತಾಯವ್ವ ಮತ್ತು ಆಕೆಯ ಮಗಳು ತಾಳವ್ವ. ಈ ಇಬ್ಬರೇ ಅಲ್ಲದೆ ಮೇಲ್ವರ್ಗದವಳಾದ ಮೈನಾಬಾಯಿಯ ವೈಚಾರಿಕತೆಯೂ ಇದೆ.

"ಈ ಪೋರಿ ಜಲ್ದಿ ಏಳಂಗೇಯಿಲ್ಲ ನನಗ ಕೂಲಿ ಕೆಲಸಕ್ಕ ಹೋಗ್ಬೇಕ್ ತಡಾ ಆಗ್ತದ ಆಯ್ತು...ಇದರ ನಿದ್ದಿ ಮ್ಯಾಲ ಮಣ್ಣ ಹಾಕ್ಲೇ ಯವ್ವಾ...ಏಟರೇ ನಿದ್ದಿ ಇದಕ್ಕೆ ಸುತಗೊಂಡಾದ... ದರಿದ್ದರತನ ಬಕ್ಕಳ ನಿದ್ದಿ ಮಾಡಿದರ ಅವಲಗಸಣಂತೆ...."[11] ಎಂಬ ತಾಯವ್ವನ ಮಾತುಗಳಲ್ಲಿಯೇ ಕೆಳವರ್ಗದ ಹೆಣ್ಣಿನ ಕೆಲಸವೇನು ಎಂಬುದಿದೆ. ಹೀಗೆ ಕೂಲಿ ಕೆಲಸ ಮಾಡಲು ಪ್ರೇರೇಪಿಸಿರುವುದಾದರೂ ಯಾವುದು ಅದೇ ಸಮಾಜ. ಇಂತಹ ಸಮಾಜವನ್ನು ಪ್ರಶ್ನಿಸುವ ಹಾಗೂ ವಿರೋಧಿಸುವ ಮನೋಭಾವ ಈ ತಾಯವ್ವನಲ್ಲಿದೆ.

ತಾಯವ್ವ ತನ್ನ ಹಿಂದಿನ ಕಥೆಯನ್ನು ನೆನಪಿಸಿಕೊಳ್ಳುತ್ತಿದ್ದಾಳೆ. ವಿವಾಹವೆಂಬುದು ಹೆಣ್ಣಿಗೆ ಅಗತ್ಯವಾಗಿ ಬೇಕಾದುದೆಂದು ಈ ಸಮಾಜ ಕಟ್ಟಿಕೊಟ್ಟಿರುವುದು ಮತ್ತು ಅದಕ್ಕೆ ತಕ್ಕಂತೆಯೇ ಅನುಸರಿಸುವ ಜನರು ಇವರಿಬ್ಬರಿಂದ ಹಿಂಸೆಗೆ ಒಳಗಾಗುವವರು ಯಾರು ಎಂದರೆ ಹೆಣ್ಣೇ ಎಂಬುದನ್ನು ತಾಯವ್ವನಿಂದ ತಿಳಿಯಬಹುದು. "ಹೆಣ್ಣೇನೋ ಮಗಾ, ದೆವ್ವ ಬೆಳೆದ್ಹಾಂಗ ಬೆಳೀತಾವ. ಹಾಂಹಾಂ ಅನ್ನಟಗೇ ಈಟೆತ್ತರ, ಈಟು ಧಮ್ಮ ಆಗಿ ಮೈಕೈ ತುಂಬ್ಕೊಂಡು ಮಕ್ಕಳ ಹಡೀಲಕ್ಕ ತಯಾರಾಗ್ತವ" ಎಂಬ ಲಚ್ಚವ್ವನ ಮಾತಿನಲ್ಲಿ ಹೆಣ್ಣು ಇರುವುದೇ ಬೆಳೆಯುವುದಕ್ಕೆ ಮತ್ತು ಮಕ್ಕಳನ್ನು ಹೆರುವುದಕ್ಕೆ ಎಂದೇ ಆಕೆಯನ್ನು ಬಳಸಲಾಗುತ್ತಿದೆ. ಹೆಣ್ಣು ಏನಿದ್ದರೂ ಸಹ ಹುಟ್ಟಿದ ಮನೆಗಲ್ಲ ಆಕೆಯ ಮನೆಯೇ ಬೇರೆ ಆಕೆ ಎಂದಿದ್ದರೂ ನಿಮ್ಮ ಸೊಸಿನೇ ಎನ್ನುವ ಹೆಣ್ಣು ಹೆತ್ತವರು ಇದ್ದಾರೆ. "ನೀವು ನಾಳಿಗೇ ಬೇಕು ಅಂದ್ರ ; ನಂ ತಾಯವ್ವಗ ತಂದು ಕುಡ್ತಿನೆಂತ. ಆಕಿ ಎಂದಿದ್ದರನೂ ನಿಮ್ಮ ಸೊಸಿನೇ ...."[12] ಎಂದು ತಾಯವ್ವನ ಅಪ್ಪನ ಮಾತಿನಲ್ಲಿಯೇ ಆಕೆಯನ್ನು ಒಂದು ವಸ್ತುವಿನಂತೆಯೇ ಭಾವಿಸಲಾಗಿದೆ. ಹೆಣ್ಣು ಎಂದರೆ ಬರೀ ಸೌಂದರ್ಯವೇ ಎಂಬುದನ್ನು ತಾಯವ್ವನ ವರ್ಣನೆಯಲ್ಲಿ ನೋಡಬೇಕು. "ಹೆಂತಾ ಪೋರೇ ಯವ್ವಾ.......ಗೋಡ್ರ ಮನ್ಯಾಗಿನ ಕಂಬದ ಚಿತ್ತಾರದಾಗಿನ ಗೊಂಬಿ ಇದ್ಹಾಂಗ ಹಳಾ, ಆಕಿನ ಕಣ್ಣೇನು, ಮೂಗೇನು, ಬಣ್ಣಾ ಏನು , ಕೈ ತೊಳ್ಕೊಂಡು ಮುಟ್ಟಬೇಕು ನಮ್ಮ ಈಸೂರ ಪುಣ್ಯ ಮಾಡಿದ್ದ."[13] "ಭಲೆ....ಹೆಂತಾ ಪೋರಿನೋ ಅದು....ಹಾರ್ರ ಕುಲದಾಗ ಹುಟ್ಟ ಹೆಣ್ಣಾ ಅದು ತಪ್ಪಿ ಮಾದರ ಜಾತ್ಯಾಗ ಹುಟ್ಟ್ಯಾದ. ಆಕಿಗಿ ನೋಡ್ಡರ ಸಾಕು. ಮೈತುಂಬಾ ಕಂಟಿರುವಿ ಕಟಾಕಟಾ ಕಡದ್ದಂಗಾಗ್ತದ. ಹೆಣ್ಣಂದ್ರ ಅದೂ..."[14] ಎಂದು ಹೆಣ್ಣಿನ ಚೆಲುವಿಕೆಯನ್ನು ಹೇಳುವಂತಹ ಅತ್ತೆ ಮಾವಂದಿರು ಮತ್ತು

ಸಮಾಜ ಆಕೆಗೆ ಮಕ್ಕಳಾಗಲಿಲ್ಲ ಎಂದು ತನ್ನ ಮಗನ ಸಾಮರ್ಥ್ಯ ತಿಳಿಯದೇ ಆಕೆಯನ್ನು ಹೊರಗಡೆ ಅಟ್ಟುವುದೇಕೆ? ತಾಯ್ತನ ಎಂಬುದು ಅಷ್ಟು ಮುಖ್ಯವೇ? ತನ್ನ ಮೊದಲ ಗಂಡ ಈಸೂರನಿಂದ ಬಿಡುಗಡೆಯಾದ ತಾಯವ್ವನಿಗೆ ಉಡಿಕೆಯಂತಹ ಎರಡನೆಯ ಮದುವೆಗೆ ಸಮಾಜದಲ್ಲಿ ಅವಕಾಶವಿದ್ದರೂ ಉಡಿಕೆಯನ್ನು ಮಾಡಿಕೊಂಡರೂ ಸಹ ಆಕೆ ಮುಕ್ತಳಾಗಲೂ ಸಾಧ್ಯವಿದೆಯೇ?

ಹೆಣ್ಣನ್ನು ತಮಗೆ ಬೇಕಾದ ರೀತಿಯಲ್ಲಿ ಬಳಸಿಕೊಳ್ಳುವಂತಹ ಸಮಾಜ ಉಡಿಕೆಯಂತಹ ಮದುವೆಗೂ ಸಹ ಅವಕಾಶ ನೀಡಿರುವುದನ್ನು ಕಾಣಬಹುದು. "ನೀ ಯಾಕ್ ಈ ಪಾಟಿ ಅಳ್ತಿ ಬಿಡೇ ಗಂಗಾ........ಪೋರಿ ಎದಿ ಒಡಕೊಂಡೆತ್ತು, ಅವನಿಗೊಂದು ಹೆಣ್ತಿ ಸಿಕ್ಕರ ಈಕಿಗೊಂದು ಗಂಡ ಸಿಕ್ತಾನ ಬಿಡು. ನಾವೇನು ಹಾರ್ರು, ಕ್ಯಾಮಟಗೇರು ಕೆಟ್ಟು ಹ್ವಾದೇವಾ....? ಮಗಳಿಗೆ ಮನ್ಯಾಗಿಟ್ಟುಕೊಂಡು ಕೊಳೆಸ್ತೇವಾ........? ಸರಿಸರಿ, ಬ್ಯಾರೆ ವರಾನೋಡಿ ಕೊಟ್ಟು ಉಡಕೆ ಮಾಡದ್ರಾಯ್ತು. ಬಿಡು ಸುಮ್ನಿರು..."[15] ತಾಯವ್ವನ ತಂದೆ ತಾಯಿಗಳಿಗೆ ಸಮಾಧಾನ ಮಾಡುವ ಮಾತಿದು ಎಂದು ಕಂಡುಬಂದರೂ, ಹೆಣ್ಣನ್ನು ಇನ್ನೂ ಆಳಕ್ಕೆ ತಳ್ಳುವುದೇ ಆಗಿದೆಯೇ ಹೊರತು ಆಕೆಯನ್ನು ಮೇಲೆತ್ತುವ ಪ್ರಯತ್ನವೇ ಇಲ್ಲ.

ಸಮಾಜ ರೂಪಿಸಿರುವಂತಹ ವಿವಾಹ ಎಂಬ ಸಂಸ್ಥೆ ಗಂಡನ್ನು ಪ್ರಧಾನವಾಗಿಸಿ ಆತನಿಗೆ ಇಚ್ಛೆ ಬರುವಂತೆ ಹೆಣ್ಣನ್ನು ನಡೆಸಿಕೊಳ್ಳುತ್ತಿದೆಯೇ ಹೊರತು ನಿಜವಾದ ಮನುಷ್ಯ ಸಂಬಂಧಗಳಿಂದಲ್ಲ. ವಿವಾಹವೆಂಬುದು ದೈಹಿಕ ವ್ಯಾಪಾರವಾಗಿದೆ ಎಂಬುದನ್ನು ತಿಳಿಯಲು ಈಸೂರ ತಾಯವ್ವನ ಮೇಲೆ ನಡೆಸುವ ದೌರ್ಜನ್ಯವೇ ಕಾರಣವಾಗಿದೆ. ಲಚವ್ವತ್ತಿ ಕಡ್ಡಿ ಮುರಿದಂತೆ ಝಾಡಿಸಿ ಮಾತೊಗೆದಳು. ಮಾನಿಂಗ ಕಕ್ಕಾಬಿಕ್ಕಿಯಾದ. ನಾಲ್ಕು ಮಂದಿ ಕುಲದವರು ನೆರೆದರು, ಹೆಂಗಸರು ಗಂಡಸರು ಬಂದರು, ಆ ಕಡೆಗಿಷ್ಟು ಜನ ಈ ಕಡೆಗಿಷ್ಟು ಜನ ಕೂಡಿ ಮಾತುಗಳನ್ನು ನಡೆಸಿದರು, ಓಡಿಸಿದರು, ಕುಣಿಸಿದರು, ಬಾಯಿಗೆ ಬಾಯಿ ಹತ್ತಿತು. ಈಸೂರ ಎದ್ದು ಬಂದವನೇ ಹಿಂದೆ ಮುಂದೆ ನೋಡದೆ ತಟ್ಟನೆ ತಾಯವ್ವನ ಕೊರಳಿಗೆ ಕೈಹಾಕಿ ತಾಳಿಕರಿಮಣಿ ಕಿತ್ತಿ, ಹರಿದು ಬಿಸಾಡಿ, ಅವಳನ್ನು ಒದ್ದುಬಿಟ್ಟನು. ಸತ್ನೆಪ್ಪೋ....ಎಂದು ಚೀರಿದವಳೇ ತಾಯವ್ವ ಅಂಗಳದಲ್ಲಿ ಉರುಳಿ ಹೊಟ್ಟೆ ಹಿಡಿದುಕ್ಕೊಂಡು ಬೇಹೋಶಾದಳು. ಮಾನಿಂಗ ಮುಂದೆ ನುಗ್ಗಿದವನೇ ಮೈಯ ಶಕ್ತಿಯನ್ನೆಲ್ಲ ತೋಳಿನಲ್ಲಿ ತಂದು ಅಳಿಯನ ಕೆನ್ನೆಗೆ ತೀಡಿ ಬಾರಿಸಿದ."[16] ಹೆಣ್ಣು ತನ್ನ ಮಕ್ಕಳಿಂದಲೇ ತಾನು ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳಬೇಕೇ? ಈ ತಾಯ್ತನವನ್ನು ಗುರುತಿಸಿಕೊಳ್ಳಲು ತಾಯವ್ವನಿಗೆ ಉಡಿಕೆಯನ್ನು ಗೋಳಪ್ಪನೊಂದಿಗೆ ಮಾಡಲಾಗುತ್ತದೆ. ಅಲ್ಲಿ

ತಾಯವ್ವನ ಗುಣ ಹೇಗಿದೆ ಎಂದು ಈಕೆಯ ಅಪ್ಪನೇ ಹೇಳುತ್ತಾನೆ. "ಪೋರಿ ಏನ ಕೇಳ್ತೀರಿ, ಗುಣವಂತಿ ಅಂದ್ರ ಗುಣವಂತಿ, ನೀವು ಆಕಿ ತೆಲಿಮ್ಯಾಲ ಎತ್ತಿ ಒಂದು ಕಲ್ಲು ಬಂಡಿ ಹಾಕದರನೂ ಕುಯ್ ಕುಯ್ ಅನಕ್ಕಿ ಅಲ್ಲ ಮಗಳು. ಅನಗೇಡಿಸೂಳ್ಯಾ ಮಕ್ಕಳಿದ್ದರು ಆ ಬೀರನಳ್ಳಿ ಬೀಗರು ನಮ್ ತಾಯವ್ವಗ ಸುತಾರಾಂ ನಡಸ್‌ಗೋಮಂಗಿಲ್ಲ ಅಂದ್ರು. ಇಲ್ಲದಿದ್ರ ಆಕಿಯೇನ್ರಿ.......ಸವತಿ ಸಂಗಾಟನೂ ಖುಷಿಯಿಂದ ಸಂಸಾರ ಮಾಡ್ಲಕ್ಕ ತಯಾರಿದ್ದಳು."[17] ಎಂದು ಹೇಳುವ ತಾಯವ್ವನ ಅಪ್ಪ ನೀವು ಸುಖವಾಗಿ ಇಟ್ಟುಕೊಂಡ್ರ ಸಾಕು, ಸುಕಾ ಅಂದ್ರ ದಿನ್ನಾ ಹೋಳಗಿ ಹುಗ್ಗಿ ಉಣಸ್ರಿ ಅಂತ ಅಲ್ಲ ಖಾರ ರೊಟ್ಟಿಗೇ ಉಂಡರನೂ ನಕ್ಕೋತ ಸಂಸಾರ ಮಾಡ್ರಿ ಆಯ್ತು" ಎಂಬ ಆದರ್ಶದ ಮಾತನ್ನು ಹೇಳುತ್ತಿದ್ದಾನೆ. ಆದರೂ ತಾಯವ್ವನಿಗಾದದ್ದು ಏನು ಬರೀ ಅಳುವಿನ ಸಂಸಾರವೆ ಎಂಬುದನ್ನು ತಿಳಿಯಬೇಕು.

ಗೋಳಪ್ಪನ ಮದುವೆಯಾದರು ಸಹ ಮೊದಲ ಗಂಡನ ನೆನಪೇ ಆಕೆಯಲ್ಲಿದೆ. ಆದರೆ ಆಕೆಯ ಪ್ರೀತಿ ಪ್ರೇಮಕ್ಕೆ ಈಸೂರ ಕಿವುಡ, ಕುರುಡನಾಗಿದ್ದು ತಾಳಿಯನ್ನೇ ಕಿತ್ತುಕೊಂಡು ಹೊರಗೆ ತಳ್ಳಿದ್ದ. ಹೆಣ್ಣಿಗಿರುವಂತಹ ಪ್ರೇಮ ಗಂಡಿಗ್ಯಾಕಿಲ್ಲ ಎಂದು ಕೇಳಬಹುದಾದರೂ ಲೇಖಕಿಯೇ ಕೊಡುವ ಉತ್ತರ ಏನೆಂದರೆ ಗಂಡಿನ ವ್ಯವಸ್ಥೆಗೊಳಪಟ್ಟ ಸಮಾಜದ ರೀತಿ, ರಿವಾಜುಗಳನ್ನು ಹೆಣ್ಣು ಪ್ರಶ್ನಿಸುವುದಂತೂ ಸಾಧ್ಯವೇ ಇರಲಿಲ್ಲ. ಗಂಡನ ಆಸರೆಯಲ್ಲಿಯೇ ಹರೆಯ ಸವೆಯಿಸಬೇಕಾಗಿತ್ತು. ಅವಳಿಗೆ ಒಬ್ಬನ ಆಶ್ರಯ ತಪ್ಪಿದರೆ ಮತ್ತೊಬ್ಬನ ನೆರಳಿಗೆ ಸರಿಯುವುದು ಅನಿವಾರ್ಯವೆಂದು ಸಮಾಜ ತಿಳಿದಿತ್ತು. ಈ ಮಾತುಗಳೇ ಹೇಳುತ್ತವೆ ಗಂಡಿನ ನಡುವಿನ ಆಟಿಕೆಯ ವಸ್ತು ಈ ಹೆಣ್ಣು ಅಂತ.

ಗೋಳಪ್ಪನ ಚರಿತ್ರೆಯನ್ನು ನೋಡಿ ಮೊದಲ ಹೆಂಡತಿ ಸಾಬವ್ವ ಭೀಮಶ್ಯಾನೊಂದಿಗೆ ಓಡಿ ಹೋಗುವುದು ಪ್ರತಿರೋಧವೇ ಆಗಿದೆ. ಹಾಗೆಯೇ ಎರಡನೆಯ ಹೆಂಡತಿ ಮಾಳಿಯನ್ನು ಬಾವಿಗೆ ಹಾಕಿ ಸಾಯಿಸುವುದು ದೌರ್ಜನ್ಯವೇ ಆಗಿದೆ. 'ಗಂಡು' ಎಂಬ ಈ ಪದಕ್ಕೆ ಮರಗವ್ವ ದೇವತೆಯೂ ಸಹ ಬುದ್ಧಿ ಕಲಿಸುವಂತಹ ಸಾಮರ್ಥ್ಯವಿಲ್ಲದವಳೇ ಆಗಿದ್ದಾಳೆ. ಗೋಳಪ್ಪ ಮತ್ತೊಬ್ಬ ಹೆಣ್ಣು ನೀಲಿ ಅಂದರೆ ಹೊಸ ಹೆಣ್ತಿಯನ್ನು ಕರೆದು ತಂದಾಗ ನೀಲಿ ಕೇಳುವ ಮಾತುಗಳಿಗೆ ಅವನ ಉತ್ತರ ಈ ರೀತಿಯದಾಗಿದೆ. ಮನೇಲಿರಕ್ಕೆ ತಾಯವ್ವ ಮಜಾ ಮಾಡಲಿಕ್ಕೆ ಬೇರೇವ್ರು ಎಂದು, ಅಂದರೆ ಗಂಡಿಗೆ ದೇಹವೇ ಯಾಕೆ ಮುಖ್ಯವಾಗುತ್ತದೆ. ಎಂಬ ಪ್ರಶ್ನೆ ಹುಟ್ಟಿಕೊಳ್ಳುತ್ತದೆ. ಏಕೆಂದರೆ ಸಮಾಜವಾದರೂ ಪುರುಷನದೇ ಅಲ್ಲವೇ ? ಎಂಬ ಉತ್ತರವನ್ನು ಕೊಟ್ಟು ಸುಮ್ಮ ನಾಗಬೇಕಾಗುತ್ತದೆ. ಗಂಡು ಹೆಣ್ಣನ್ನು ದೈಹಿಕವಾಗಿ ಮಾತ್ರ ಆಕೆಯನ್ನು

ನೋಡುತ್ತಿದ್ದಾನೆಯೇ ಹೊರತು ಅದರಿಂದಾಚೆಗೆ ನೋಡುವ ದೃಷ್ಟಿಕೋನ ಈ ಸಮಾಜದಲ್ಲಿ ಇಲ್ಲವೇ ಇಲ್ಲ ಎಂಬ ಮಾತೇ ಪುನರಾವರ್ತನೆಯಾಗುತ್ತಿದೆ.

ತಾಯವ್ವನ ಗಂಡ ತಾನಿದ್ದರೂ ಬೇರೆಯವಳನ್ನು ಕರೆತಂದಿದ್ದಾನೆ. ಅವನ ಮಾತುಗಳಿಂದಲೇ ಅವನೇನು ಎಂದು ತಿಳಿಯಬೇಕು. "ಬಾರೇ ನೀಲಿ....ಮಲಕೋ ಬಾ....ಒಂದೇ ಹಾಸಗ್ಯಾಗೇ ನಾವು ಮೂರು ಮಂದಿ ಮನಕೊಂಡ್ರಾಯ್ತು ಬ್ಯಾರೆ ಹಾಸಗಿ ಇಲ್ಲ...."[18] ಎಂಬ ಗೋಳಪ್ಪನ ಮಾತನ್ನು ಕೇಳಿ ತಾಯವ್ವನಿಗೆ ಗಂಡನ ನಾಚಿಕೆಗೇಡಿತನಕ್ಕೆ ಅವಳಿಗೆ ಹೇಸಿಗೆಯಾಯಿತು. ಥೂ ಎಂದು ಉಗುಳಿ, ಆ ಹೆಂಗಸಿನ ಕೂದಲೆಳೆದು ಧಪಧಪನೆ ಬಡಿದು ಹೊರನೂಕಬೇಕೆನಿಸಿತು. ಅತ್ತೆ ಮಾವಂದಿರನ್ನು ಎಬ್ಬಿಸಿ ಅಂಗಳದಲ್ಲಿ ನಿಂತು ಒದರಾಡಬೇಕೆನಿಸಿತು. ಗೋಳಪ್ಪನ ಮುಖಕ್ಕೆ ಖ್ಯಾಕರಿಸಿ ಉಗುಳಿ ದೂರ ಓಡಬೇಕೆನಿಸಿತು. ಮತ್ತೆ ಏನೇನೋ ಅನಿಸಿ ಮುಖ ಕಠಿಣವಾಗುತ್ತಿರುವಾಗಲೇ ಗಂಡನ ಕರ್ಕಶ ದನಿ ಹರಿದು ಬಂದಿತು. ಹೆಣ್ಣು ತನ್ನಲ್ಲಿ ಸಾಮರ್ಥ್ಯವಿದ್ದರೂ ಮನಸ್ಸಿನಲ್ಲೇ ಈ ಪ್ರತಿರೋಧದ ದನಿ ಇರುವುದಾದರೂ ಅದನ್ನು ಹೊರಗಡೆ ತರುತ್ತಿಲ್ಲ. ಯಾಕೆಂದರೆ ಆಕೆಯ ಮನಸ್ಸು ಪುರುಷನನ್ನೊರತು ಪಡಿಸಿ ಬದುಕಲು ಸಾಧ್ಯವಿಲ್ಲವೇನೋ ಎನ್ನುವ ರೀತಿ ಇರುವುದೇ ಆಗಿದ್ದು, ಸ್ವಪ್ರಜ್ಞೆ ಎಂಬುದಿಲ್ಲ.

ಪುರುಷ ಮಾತ್ರವೇ ಅಲ್ಲದೇ ಆತನ ಮನಸ್ಥಿತಿಯಂತೆಯೇ ಹೆಣ್ಣು ಸೇರಿ ಕಟ್ಟಿಕೊಂಡಿರುವ ವ್ಯವಸ್ಥೆಯಾದರೂ ಎಂತಹುದು ಎಂಬುದನ್ನು ತಿಳಿಯಲು ತಾಯವ್ವನ ಅತ್ತೆಯ ಮಾತುಗಳೇ ನಿದರ್ಶನವಾಗಿವೆ. "ಅಂವಾ ಯಿಲ್ಲಾ ಬ್ಯಾಡಂತೇ ಅಂದವ್ವ.. ನಾವೇ ಮಾಡ್ಕೋ ಅಂದೇವು. ನಿನ್ನ ಚೆಲುವಿಕೆ ನೋಡಿ ಅವನೂ ಒಪಗೊಂಡ ಒಂದು ಮಮ್ಮಗಾ ಹಡ್ದು ಕೊಟ್ಟು ಮನಿ ದೀಪ ಬೆಳಗ್ತಿಯಂತ ನಿನಗೆ ಮಾಡ್ಕೊ ಅಂದೇವು ಮಗಾ...ನಿನ್ ರೂಪಾ, ಗುಣಾ, ನೋಡೆರೆ ಅಂವಾ ಹೊರಗಿನ ಬುದ್ಧಿ ಬಿಡ್ತಾನಂತ ತಿಳ್ಕೊಂಡಿದ್ವಿ, ಈಗ ನೋಡ್ದರ ಮತ್ತ ಸುರುಆಯ್ತು.[19] ಇಂತಹ ಮಾತುಗಳೆನ್ನೆಲ್ಲ ಕೇಳಿದ ತಾಯವ್ವನಿಗೆ ಸಿಟ್ಟು, ತಿರಸ್ಕಾರ ದುಃಖಗಳೇ ಮನಸ್ಸಲ್ಲಿ ತುಂಬಿದ್ದುದರಿಂದ ಹೇಳುತ್ತಾಳೆ. ನೀರು ಕಾಯಿಸು ಎಂದಿದಕ್ಕೆ ನಾ ಕಾಸಂಗಿಲ್ಲ ಆ ಹಲಕಟ್ ರಂಡೀಗಿ ನಾ ಯಾಕ್ ನೀರ ಕಾಸಿಕುಡ್ಲಿ ಎಂದು ಸಿಟ್ಟಿನಿಂದ ಅಬ್ಬರಿಸುವಿಕೆ ಮಾತುಗಳನ್ನೇ ಆಡುತ್ತ ತನ್ನ ಗಂಡನಿಗೆ ಉತ್ತರ ನೀಡುತ್ತಾಳೆ. ಗಂಡನ ನೀಚತನಕ್ಕೆಲ್ಲಾ ಆಕೆಯ ಪ್ರತಿಕ್ರಿಯೆ ಅಳುವುದೇ ಆಗಿದೆ. ಯಾಕೆಂದರೆ ಆಕೆಯ ಅಸಹಾಯಕತೆ ಹೊಳೆಗೆ ಬಟ್ಟೆ ಒಗೆಯೋದಕ್ಕೆ ಹೋದಾಗ ತಾಯವ್ವನ ಸ್ಥಿತಿಯಾದರೂ ಏನು "ಸಾಬೂನು ಹಚ್ಚಿ ತಿಕ್ಕಿ ಹಸೂನಾಗಿ ಒಗೆದು ಕೊಟ್ಟಿದ್ದ ಬೆಳ್ಳನೆಯ ಧೋತರದ ತುಂಬೆಲ್ಲ ಅಂಗೈ ಅಗಲದಕಲಿಗಳನ್ನು ಕಂಡು ಅವಳೆದೆ ಉರಿಯುತ್ತದೆ. ಕಣ್ಣಿನಿಂದ

ಧೋ ಅಂತ ಸ್ವಾತಿ ಮಳಿ ಬಂದಂತೆ ಧಬಾ ಧಬಾ ಅಂತ ನೀರುಕ್ಕಿ ಹರಿಯುತ್ತದೆ. ಆದರೆ ಅವಳು ಮಾಡುವುದಾದರೂ ಏನು? ಹೆಣ್ಣಿನ ಜನ್ಮದ ಮ್ಯಾಲ ಮಣ್ಣ ಹಾಕ್ಲೇ ಯವ್ವಾ... ಹೆಣ್ಣಾಗಿ ಎಂದೂ ಹುಟ್ಟಬಾರ್ದು..."[20] ಎನ್ನುತ್ತಾ ಮನೆಗೆ ಬರುತ್ತಾಳೆ. ಹೆಣ್ಣು ತನಗೆ ನೋವಾದಾಗ ತನ್ನ ಜನ್ಮವನ್ನು ಕುರಿತು ತಾನೇ ಹೀನಾಯವಾದ ಮಾತನ್ನಾಡುವುದಾಗಿದೆ. ಆಕೆ ತನ್ನನ್ನುಗಂಡ ಯಾಕೆ ಉಡಿಕಿ ಮಾಡಿಕೊಳ್ಳಬೇಕಾಗಿತ್ತು ಎಂಬಂತಹ ಪ್ರಶ್ನೆಗೆ ಉತ್ತರ ಹುಡುಕುತ್ತಿರುವುದು ಆಕೆಯ ವೈಚಾರಿಕತೆಯೆ ಆಗಿದೆ ಮತ್ತು ಮಾತಿನ ಮೂಲಕ ಹೇಳಲಾಗದ್ದನ್ನು ಮೌನದ ಮೂಲಕ ತನ್ನ ಮನಸ್ಸಲ್ಲಿ ಅಂದುಕೊಳ್ಳುವ ರೀತಿಯೇ ಪ್ರತಿಭಟನೆಯಾಗಿದೆ.

ತಾಯವ್ವ ಗರ್ಭಿಣಿಯೆಂಬ ಸುದ್ಧಿ ತಿಳಿದ ಗೋಳಪ್ಪನಿಗೆ ಹೆಂಡತಿಯ ಬಗ್ಗೆ ಖುಷಿ, ಪ್ರೇಮ ಹೆಚ್ಚಾಗುತ್ತದೆ. ಹೆಣ್ಣು ತನ್ನ ಮಕ್ಕಳಿಂದಾಗಿಯೇ ತನ್ನ ಅಸ್ತಿತ್ವ ಗುರುತಿಸಿಕೊಳ್ಳಬೇಕೆ? ಹೆಣ್ಣಿಗೆ ತಾಯ್ತನ ಎಂತಹ ದುಃಖವನ್ನಾದರೂ ಸಹ ಮರೆಸುತ್ತದೆಯೇ? ಇಲ್ಲ ಗಂಡಿಗೆ ತಾನು ನಡೆಸುವಂತಹ ದಬ್ಬಾಳಿಕೆ ದೌರ್ಜನ್ಯವನ್ನು ಕಡಿಮೆ ಮಾಡುತ್ತದೆಯೇ? ಇಲ್ಲಿ ಹೆಣ್ಣನ್ನು ತಾಯಿ ಎಂಬುದರಿಂದಲೇ ವೈಭವೀಕರಿಸಲಾಗಿದೆ, ಪ್ರತಿನಿಧಿಸಲಾಗಿದೆ. ತಾಯವ್ವನಿಗಿಂತಲೂ ಆಕೆಯ ತಾಯಿ ತಂದೆಯರಿಗೆ ಖುಷಿ ಏಕೆಂದರೆ ತಮ್ಮ ಮಗಳು ಬಂಜೆ ಎಂಬ ಅಪವಾದ ಹೋಯಿತಲ್ಲಾ ಎಂದು.

ಹೆಣ್ಣು ಹುಟ್ಟಿದಾಗಿನಿಂದಲೂ ನೋವನ್ನು ತಿನ್ನಬೇಕು ಎಂಬುದನ್ನು ನಮ್ಮ ಸಂಪ್ರದಾಯವೇ ಕಟ್ಟಿಕೊಟ್ಟಿರುವ ಮಾತುಗಳನ್ನು ಗಮನಿಸಬೇಕು. "ಅಳಬ್ಯಾಡ ಮಗಾ.......ತುಟಿಕಚ್ಚಿ ಬ್ಯಾನಿ ತಿನ್ಬೇಕವ್ವಾ..... ಹೆಣ್ಣಿನ ಜನ್ಮಕ ಬ್ಯಾನಿ ತಿನ್ನಾದು ಬ್ಯಾರೆ ಮಂದಿಗೆ ತಿಳಿಬಾರ್ದು ತಾಯೀ...... ಹೆಣ್ಣಂದ್ರ ಬ್ಯಾನಿ ತಿಲ್ಲಕ್ಕೆ ಹುಟ್ಟಿದಕ್ಕೇ......" ಹೆಣ್ಣೆಂದರೆ ಬರೀ ನೋವು, ಗೋಳುಗಳೇ. ಇಲ್ಲಿ ಸಮಾಜ ಕಟ್ಟಿರುವ ವ್ಯವಸ್ಥೆಯನ್ನು ಅನುಸರಿಸುತ್ತಿರುವ ಹೆಣ್ಣು ಆಡುವ ಮಾತೇ ಆಗಿದೆ. ಆಕೆ ನೋವೆಂಬ ಶಬ್ಧದಿಂದ ಹೊರ ಬರಲು ಆಗುತ್ತಿಲ್ಲವೇ? ಇದು ತಾಯವ್ವನ ದಾರೆ, ಆಕೆಯ ಮಗಳು ತಾಳಿಯದು ಮತ್ತೊಂದು ರೀತಿಯ ವೈಶಿಷ್ಟ್ಯವನ್ನು ಹೊಂದಿದೆ.

ತಾಳಿ ಮೈನಾಬಾಯಿಯ ಮನೆಯಲ್ಲಿ ಕೆಲಸವನ್ನು ಮಾಡುತ್ತಿರಬೇಕಾದರೆ ಚಿಕ್ಕವಯಸ್ಸಿನಲ್ಲಿಯೇ ಆಕೆ ಕೇಳುತ್ತಿದ್ದಂತಹ ಪುರಾಣ ಯಾವುದು "ಹೆಣ್ಣು ಅಂದ್ರ ಅದು ಬಾಳ ಮೃದು, ಕೋಮಲವಾದದ್ದು. ಅವಳಿಗೆ ಹೂವಿನಂಥ ನಯ, ನಾಜೂಕು, ಬಹಳ ಸೂಕ್ಷ್ಮ.....

ಬಳ್ಳಿಯಂತೆ ಬಳಕುತ್ತದೆ, ಬಹು ಆಕರ್ಷಕ. ಅದಕ್ಕೆ ಒಂಟಿಯಾಗಿ ಗಟ್ಟಿಯಾಗಿ ನಿಂತು ಬಾಳುವುದಕ್ಕೆ ಸಾಧ್ಯವೇ ಇಲ್ಲ. ಬಳ್ಳಿಗೆ ಮರದ ಆಸರೆ ಬೇಕೇ ಬೇಕು. ಬಳ್ಳಿ ಮತ್ತು ಹೆಣ್ಣು ಆಸರೆಯಿಲ್ಲದೆ ಬದುಕುವುದಿಲ್ಲ. ಅದಕ್ಕೆಯೇ ಹಿಂದೆ ಮನು ಮಹರ್ಷಿ ಹೀಗೆ ಹೇಳಿದ್ದಾನೆ–ಹೆಣ್ಣು ಕನ್ಯೆಯಾಗಿರುವಾಗ ಪಿತೃ ಅಂದರೆ ತಂದೆ ಆಸರೆಯಲ್ಲಿಯೂ, ತರುಣಿಯಾಗಿರುವಾಗ ಪತಿ ಅಂದರೆ ಗಂಡನ ನೆರಳಿನಲ್ಲಿಯೂ ಮತ್ತೆ ವೃದ್ಧೆ ಅಂದರೆ ಮುದುಕಿಯಾಗಿರುವಾಗ ಮಗನ ಆಸರೆಯಲ್ಲಿಯೂ ಇರಬೇಕಾಗುತ್ತದೆ. ಹೆಣ್ಣು ಮಕ್ಕಳು ಸ್ವತಂತ್ರವಾಗಿ ಬದುಕಬಾರದು. ಹಾಗೆ ಬದುಕಲು ಗಂಡಸು ಬಿಡಬಾರದು."[21] ಎಂಬುದನ್ನೆ ಸಮಾಜದಲ್ಲಿ ರೂಪಿಸಲಾಗಿದೆ. ಇಂತಹ ಪುರಾಣವನ್ನು ಕೇಳಿ ಬೆಳೆದಂತಹ ತಾಳಿಯ ವ್ಯಕ್ತಿತ್ವವಾದರೂ ಎಂತಹದ್ದು, ಕತ್ತಲಲ್ಲಿ ಕಾಣಿಸದೇ ಡಿಕ್ಕಿ ಹೊಡೆದಂತಹ ತಂದೆಗೆ ಹೇಳುವುದು ಯಾವನೇಲೆ ಹೆಣಾ ಎತ್ತಿ ಕಾಣಸಂಗಿಲ್ಲೆ ಎನ್ನುವ ತಾಳಿಯಲ್ಲಿನ ಮಾತು ಯಾವುದು ಪ್ರತ್ಯಕ್ಷವಾಗುವುದಿಲ್ಲವೋ ಅದನ್ನು ಪರೋಕ್ಷವಾಗಿಯಾದರೂ ಹೇಳುವ ಪ್ರತಿರೋಧದ ಮನೋಭಾವವಿದೆ. ಕತ್ತಲಲ್ಲಿ ಕಾಣಿಸಿಲ್ಲ ಅಂದ್ರೆ ಧ್ವನಿಯಾದರೂ ಕೇಳಿಸಲಿಲ್ಲವೇ? ಮಗಳು ಅನ್ನೋದನ್ನು ಮರೆತು ಬಿಟ್ಟಿದಿಯಾ? ನೀನು ಎಂಬ ರೀತಿಯಲ್ಲಿ ಅಪ್ಪನ ರೂಪದಲ್ಲಿನ ಗಂಡಿಗೆ ಮಗಳಾಗಿ ನೀಡುವ ಪ್ರತ್ಯುತ್ತರವೇ ಆಗಿದೆ.

ಇಂತಹ ಪ್ರತಿಭಟನೆಯ ಮಾತುಗಳನ್ನಾಡಿದರೂ ಸಂಬಂಧಗಳಿಂದ ಭಾವನೆಗಳಿಂದ ಹೊರಬರುವುದು ಸಾಧ್ಯವೇ ಇಲ್ಲವೇ? ಏಕೆಂದರೆ ತಾಳಿ ತನ್ನ ಅಪ್ಪನಿಗೆ ಒಂದು ರೂ.ಕೊಡುತ್ತಾಳೆ. ಮಗಳನ್ನು ನಡೆಸಿಕೊಳ್ಳುವ ಹಾಗೆ ನಡೆಸಿಕೊಳ್ಳದ ಗೋಳಪ್ಪ ಆದರೂ ಮಗಳಿಂದ ತಾನು ದುಡ್ಡನ್ನು ಈಸಿಕೊಳ್ಳುವುದು, ಗಂಡು ಎಂತಹ ಸಂದರ್ಭದಲ್ಲಿಯೂ ಗಂಡೇ ಆಗಿದ್ದಾನೆ. ಇಲ್ಲಿ ಲೇಖಕಿ ಕಪ್ಪು–ಬಿಳುಪು ಪಾತ್ರಗಳನ್ನೇ ಸೃಷ್ಟಿಸಿದ್ದಾರೆ ಎನ್ನಿಸುತ್ತದೆ. ಗಂಡು ಯಾವಾಗಲೂ ಸ್ವಾರ್ಥಿ, ಆಕ್ರಮಣಕಾರಿಯೇ, ಹೆಣ್ಣು ಭಾವನಾತ್ಮಕ ಜೀವಿ, ಶೋಷಣೆಗೆ ಒಳಗಾಗಿದ್ದು ನಿತ್ಯ ಅವಳಿಗೆ ನೋವೇ ಜೀವನವಾಗಿದೆಯೇ? ಇದನ್ನು ಮೀರಿ ಆಚೆಗೆ ಈ ಲೇಖಕಿ ಹೋಗುವುದೇ ಇಲ್ಲ.

ತಾಯವ್ವ ಸತ್ತಾಗಿನ ಮಾತುಗಳು ನೋವಿನ ಆಕ್ರಂದನವೇ ಆಗಿದ್ದರೂ ಸಹ ಇರುವಂತಹ ವ್ಯವಸ್ಥೆಯನ್ನೇ ಕುರಿತು ಹೇಳಿರುವುದಾಗಿದೆ. "ನೀ ಸತ್ತರ ದೀಪಕ್ಕೆ ಎಣ್ಣೆ ಇಲ್ಲೇ ತಾಯೀ....ನೀ ಹಗಲ ಸಾಯೋದಿತ್ತೆ, ನನ್ನವ್ವಾ...ನಮ್ಮದು ಹುಣ್ಣಿನಂಥಾ ಬಡತನ ಅದಾರೆಯವ್ವಾ ನಮ್ಮನ್ಯಾಗ ಗಂಡಸರಿಲ್ಲೇ ಯವ್ವಾ..ದುಡಿದು ತಂದು ಹಾಕಾ ಗಂಡಸ ಇಲ್ರೇ, ಯವ್ವದೇರೇ ಗಂಡಿದ್ದೂ ನಮ್ಮವ್ವ ರಂಡಿತನಗಳದಲೇಯವ್ವಾ...ಯಾರಿಗಿನೂ ಒಂದು ಮಾತ ಹೇಳಲಿಲ್ಲೇ ತಾಯೀ.... ಎಲ್ಲಾ ಹೊಟ್ಯಾಗಿಟ್ಟುಕೊಂಡೇ ತಾಳ್ಕೋತಿದ್ದಳ್ರೇ ಯಕ್ಕಾ.... ಅದು ಹೊಟ್ಟಿ ಬ್ಯಾನಿ ಹುಟಸ್ತೆ

ಯವ್ವಾ...ನೀನನಗ ಬಿಟ್ಟು ಹ್ವಾದೇನೇ ನನ್ ಕಾಶೀ....ನಾ ನಿನಗ ಎಲ್ಲಿ ಹುಡುಕಲೇ ಯವ್ವಾ...ನೀಯಾ ಅಡವಿ ಅರಣ್ಯ ಸೇರ್ದೆ ಯವ್ವಾ...ಯಾ ಗುಡ್ಡಾ ಘಟ್ಟಾ ಸೇರ್ದೆ ನನ್ ತಾಯಿ....ನಾ ಎಲ್ಲೆಂತ ನಿನ್ ಇಂದೆ ಬರ್ಲೇ ಯವ್ವಾ....”[22]

ತಾಯವ್ವ ತನ್ನ ಗಂಡನ ಕೆಲಸಕ್ಕೆ ಪ್ರತಿರೋಧ ಮಾತುಗಳನ್ನಾಡಿದರೂ ಸಹ ಮೈನಾ ಬಾಯಿಯ ಬಳಿ ಆಡುವ ಮಾತುಗಳಿಂದ ಆಕೆ ಸಮಾಜವನ್ನು ಅನುಸರಿಸುತ್ತಿದ್ದಾಳೆಂಬುದನ್ನು ತಿಳಿಯಬೇಕು. “ಹೆಣ್ಣಿಗೆ ತಂದಿ, ಗಂಡ, ಮಗಾ ಎಲ್ಲರೂ ಚೆನ್ನಾಗಿದ್ದರೆ ಆಕೆಯ ಬಾಳು ಹಸನು ಇಲ್ಲಂದ್ರೆ ಮೂರಾ ಬಟ್ಟೇನೆ....”ಇಲ್ಲಿ ತಾಯವ್ವನ ಮಾತು ಈ ರೀತಿಯಾದರೆ ಇದೇ ಸ್ಥಿತಿಯನ್ನೂ ಅನುಭವಿಸುತ್ತಾ ತನಗೆ ಗಂಡನಾದ ಕಾಡ್ಯಾ ಮತ್ತು ಮಗನಾದ ಬೆಳ್ಳಾರಿಂದ ಆಸರೆ, ಆಶ್ರಯ ಸಿಗದಿದ್ದಾಗ ಮಗ-ಸೊಸೆ ಈ ಹಣ್ಣು ಮುದುಕಿಯಾದಂತಹ ತಾಳವ್ವನನ್ನು ಸರ್ಕಾರದವ್ರು ವಯಸ್ಸಾದವರಿಗೆ ಯಾರು ಇಲ್ಲದ ಅನಾಥರಿಗೆ ಹಣಕೊಡುತ್ತಾರೆಂದು ಹೇಳಿದರೆ ನನಗೂ ಒಬ್ಬ ಮಗನಿದ್ದಾನೆ. ನಾನ್ಯಾಕೆ ಯಾರು ಇಲ್ಲದ ಪರದೇಸಿಯಾಗಲಿ ಎಂದು ಇರುವ ವ್ಯವಸ್ಥೆಯಲ್ಲೇ ನಡೆಯುತ್ತಿದ್ದರೂ ಸಹ ಆಕೆಯ ಪ್ರತಿಭಟನೆಯಾದರೂ ಯಾವಾಗ? ಆಕೆ ನೋಡುವ ಲೋಕದ ಕ್ರಮವಾದರೂ ಏನು? ಚಿಕ್ಕವಯಸ್ಸಿನಿಂದಲೂ ಅಂದು ಕೊಳ್ಳುತ್ತಿದ್ದ ಪ್ರಶ್ನೆ ಗಂಡಸಿನ ಬಳಿಯೇ ಹೆಣ್ಣು ಏಕಿರಬೇಕು? ಎಂಬುದು. ಮೈನಾ ಬಾಯಿಯ ಮನೆಯಲಿ ಕೇಳಿದಂತದ್ದೇ ಪುರಾಣವಾದ “ನಮ್ಮ ದೇಶದಲ್ಲಿ ಹೆಣ್ಣು ಮಕ್ಕಳಿಗೆ ಇರುವಷ್ಟು ಗೌರವ, ಮಾನ-ಮರ್ಯಾದೆಗಳು ಬೇರೆ ಯಾವ ದೇಶದೊಳಗೂ ಇಲ್ಲ. ನಮ್ಮ ಶಾಸ್ತ್ರಗಳು ಹೇಳುತ್ತವೆ ಪುರಾಣಗಳೇ ಸಾರುತ್ತವೆ. ಏನಪ್ಪಾಂತಂದ್ರೆ ನಾವು ನಮ್ಮ ಹೆಣ್ಣು ಮಕ್ಕಳನ್ನು ದೇವಿ ಅನ್ನುತ್ತೇವೆ, ಪೂಜಿಸುತ್ತೇವೆ. ಅದಕ್ಕೆ ನಮ್ಮ ಮನು ಎಂಬ ಸ್ಮೃತಿಕಾರನು ಅಂದು ಹೇಳಿದ್ದು ಎಷ್ಟು ಸತ್ಯ ಹೆಣ್ಣು ಗೃಹಿಣಿಯಾಗಿರಬೇಕು, ನಾಲ್ಕು ಗೋಡೆಗಳ ನಡುವೆ ದೇವಿಯಾಗಿರಬೇಕು ಅಂದಾಗ ಅವಳು ಪೂಜೆಗೆ ಅರ್ಹಳು ಅಂತ......ಅಂಥ ಹೆಣ್ಣಿಗೆ ಯಾವ ಕಷ್ಟವು ಬರಬಾರದೆಂದು, ಅವಳು ಹುಟ್ಟಿದಾಗಿನಿಂದ ಸಾಯುವವರೆಗೂ ಗಂಡಿನ ಅಂದ್ರೆ ಪುರುಷನ ಆಸರೆಯಲ್ಲಿಯೇ ಹಾಯಾಗಿರ್ಬೇಕು ಅಂತ ಅವನು ಹೇಳುತ್ತಾನೆ. ಇಂತಹ ಮಾತುಗಳನ್ನೇ ಹೇಳುತ್ತಿದ್ದ ಸ್ವಾಮಿಯ ಮಾತುಗಳು ತಾಳಿಯ ಕಿವಿಗೆ ನೀಸದ ತುಂಡುಗಳಂತೆ ಅಪ್ಪಳಿಸುತ್ತಿದ್ದವು. ಮೊದಲು ತಿಳಿಯದ ಪುರಾಣದ ಅರ್ಥ ಈಗ ತಾಳಿಗೆ ತಿಳಿಯುತ್ತಿದೆ. ಇದಕ್ಕೆ ತಾಳಿಯು ಕೊಡುವ ಪ್ರತ್ಯುತ್ತರ ಹೀಗಿದೆ. ಪುರಾಣ ಹೇಳುವ ಸ್ವಾಮಿಗೆ ಮಾತ್ರವೇ ಅಲ್ಲದೇ ಸಮಾಜವನ್ನು ರೂಪಿಸಿರುವ, ರೂಪಿಸುತ್ತಿರುವ ವ್ಯವಸ್ಥೆಯನ್ನೇ ಕುರಿತು ಸವಾಲಾಕುತ್ತಾಳೆ.

"ಏಯ್ ಸ್ವಾಮಿ. ಹುಚ್ಚಗೊಟ್ಟಿ...... ಸಾಕು ಮಾಡು ನಿನ್ ಸುಳ್ಳು ಪುರಾಣ, ದಗಲ್ ಬಾಜಿ ಮಾತುಗೋಳು, ಎಲ್ಲಾ ಅದಾನೋ ಗಂಡಸಿನ ಗಟ್ಟಿ ಆಸರಿ? ಯಾವನೋ ಅಂವಾ ನಿನ್ ಶಾಸ್ತರ ಪುರಾಣ ಬರದವನು? ಇದೆಲ್ಲಾ ಬರೇ ನಿಮ್ಮ ಹಲಕಟ್ ಗಿರಿಯೋ...... ಹೆಣ್ಣು ಹೆಂಗಸು ಒಬ್ಬಕ್ಕಿಗೇ ಗಟ್ಟ್ಯಾಗಿ ನಿಂತು ಬದುಕಬಾರ್ದು ಅನ್ನೋದಕ್ಕ ಈಗೆಲ್ಲಾ ಆಟಾ ಹೂಡಿ, ಪುರಾಣ ಬರ್ದು ಪ್ರವಚನ ಹೇಳ್ತಿರೇನ್ರೋ.

ತಂದಿ...ಗಂಡ...ಮಗ...ಇವು ಮೂರು ನನಗ ಟೊಳ್ಳು ಆಸರಿಗಳಾಗಿ ಹಾದು. ಆದರೂ ನಾ ಒಬ್ಬಕ್ಕೀನೇ ಸೊತಂತ್ರ ಆಗಿ ಗಟ್ಟ್ಯಾಗಿ ನಿಂತು ಬಾಳ್ಯಾ ಮಾಡಿನೋ ಸ್ವಾಮಿ. ಹೆಣ್ಣಿಗಿ ಗಂಡಿನ ಆಸರಿನೇ ಗತಿ ಅನ್ನೋ ಹಂಗ ನಾಟ್ಕಾಮಾಡಿ, ಸೋಗು ಹಾಕಿ ಶಾಸ್ತ್ರ ಬರದವ್ರು ಗಂಡಸರು. ಹೆಣ್ಣಿಗೊಂದು ನೀತಿ, ಗಂಡಿಗೊಂದು ನೀತಿ ಹಾಕಿ ಪುರಾಣ ಕಟ್ಟದವ್ರು ಲಫಂಗರು. ತಮ್ಮ ಖುದರ್ಜಿಗಾಗಿ ಗಂಡಸರು ಹೆಣ್ಣಿಗೆ ಇವೆಲ್ಲಾ ಆಸರಿಗೋಳು ಹುಟ್ಸ್ಯಾರ ಬರೆದಿಟ್ಟಾರ. ಇಲ್ಲಿ ಕುಂತ ನಿಂತ ತಂಗಿದೇರೇ ಹೆಣ್ಣ ಮಕ್ಕಳೇ ಯಾರೂ ಈ ಸ್ವಾಮಿ ಮಾತಿಗೆ ಮಳ್ಳಾಗಬ್ಯಾಡ್ರೀ. ಇವರ ಶಾಸ್ತ್ರ ಪುರಾಣಗೋಳೆಲ್ಲ ಖರೇ ಅಂತ ನಂಬಬ್ಯಾಡ್ರೀ. ಇದೆಲ್ಲಾ ಸುಳ್ಳದಾ...... ಖರೇ ಆಸರಿಗೋಳಲ್ಲ ಇವು ಖೊಟ್ಟಿ ...... ಖೊಟ್ಟಿ ಆಸರಿಗೋಳು ಇವು ನಮಗ್ಯಾರೂ ಆಸರಿ ಅಲ್ರೆವ್ವೋ...... ನಮ್ ರಟ್ಟಿಗೋಳೇ ನಮಗೆ ಆಸರಿ......" ಪುರಾಣಹೇಳುತ್ತಿದ್ದ ಸ್ವಾಮಿ ಬೆಚ್ಚಿ ಬಿದ್ದು ಸ್ತಬ್ಧನಾದ. ಅವನ ಮುಖದ ಬಣ್ಣ ಬದಲಾಯಿಸಿತು. ಬಿಳಚಿಕೊಂಡಿತು. ತಾಳಿಯ ಬರಸಿಡಿಲಿನಂಥ ಮಾತುಗಳಿಗೆ ಒಂದು ಕ್ಷಣ ಇಡೀ ವಾತಾವರಣವೆಲ್ಲ ತಟಸ್ಥವಾಗಿ ನಿಂತಿತು. ಯಾರ ಬಾಯಿಯಿಂದಲೂ ತಕ್ಷಣ ಮಾತೂ ಹೊರಡಲಿಲ್ಲ.

"ಯಾಕ ಸುಮ್ಮಕಾದೋ ಸ್ವಾಮಿ? ಇಲ್ಲಿ ಕುಂತಾರಲ್ಲ ಕೂಲಿ ಕಬಟಿ ಮಾಡಿ, ದುಡುದು ಹೊಟ್ಟೆ ತುಂಬಸಗೊಳ್ಳೊ ಹೆಂಗಸರು, ಇವರಿಗೆ ಕೇಳಿ ನೋಡು, ಇವರಿಗೆಲ್ಲಾ ಎಷ್ಟು ಗಟ್ಟಿಯಾದ, ಗಂಡಿನ ಆಸರಿಗಳು ಸಿಕ್ಕಾವಂತ ಕೇಳೋ ಸ್ವಾಮಿ. ನೀ ಕೇಳಲಿಲ್ಲಂದ್ರು ಈಗ ನಾ ಹೇಳ್ತೀನಿ. ನಿಮ್ಮ ಹಿಡಿತದಾಗಿಂದ ದೂರ ಸರಿದು ಹೆಂಗಸರು ಸ್ವತಂತ್ರ ಆಗಿ ಬಾಳ್ಯಾ ಮಾಡಬಾರ್ದು ಅಂಬೋಕೆಟ್ಟ ಉದ್ದೇಶಲಿಂದೇ ನೀವು ಹಿಂತಾ ಮೂರಾಬಟ್ಟೆ ಆಸರಿಗೋಳ ಶಾಸ್ತರ ಬರ್ದು ಇಟ್ಟೇರಿ. ಇದೆಲ್ಲಾ ಬರ್ದಂವ ರುಸಿ ಮುನಿ ಯಾವನೋ ಮಾರಾಯಾ ಎಂದೋ ಏನೋ ಬರ್ದಿಟ್ಟು ಸತ್ತು ಹೋಗ್ಯಾನ. ಎಂದು ಅಬ್ಬರಿಸಿದವಳೇ ತಾಳಿ ದಮ್ಮುಬಿಡುತ್ತ, ಕೋಲೂರಿಕೊಂಡು ಗಸಗಸನೆ ತನ್ನ ಗುಡಿಸಲ ಕಡೆಗೆ ನಡೆದಳು.[23] ಕೋಲಿಕನ ಟಕ್ ಟಕ್ ಸದ್ದು ಕ್ರಮೇಣ ದೂರ ದೂರ ಸರಿಯುತ್ತ ತಗ್ಗ ತೊಡಗಿತು. ಕೋಲು ತಾಳಿಯ ಧೈರ್ಯ ಮತ್ತು ಆತ್ಮವಿಶ್ವಾಸದ ಸಂಕೇತವಾಗಿದೆ.

ಮಗನಾದ ಬೆಳ್ಳ್ಯಾನನ್ನು ಶಾಲೆಗೆ ಕಲಿಸಲು ಹೋದಾಗ ಅಲ್ಲಿರುವ ಮೇಷ್ಟ್ರ ಕೇಳುವುದನ್ನು ನೋಡಬೇಕು. "ಹೂಂ....... ಅಲ್ಲೇ ತಾಳವ್ವ ಮಗು ಬಾಳ ಛಂದ ಅದಾನ ಬಿಡು. ಬೆಳ್ಳಗ ಎತ್ತರ ಅದಾ ಅಂದ್ವ್ಹಂಗ ಇಷ್ಟು ಛಲೋ ರೂಪ ಇರೋ ಮಕ್ಕಳು ನಿಮ್ಮಂದ್ಯಾಗ ಹುಟ್ಟೋದು ಅಪರೂಪ. ಅಲ್ವ ಕರಿ ಎಳ್ಳಿನಲ್ಲಿ ಬಿಳಿ ಎಳ್ಳಿನ ಬೀಜ ಎಲ್ಲೆರೆ ಒಂದೊಂದು ಕೂಡಿರ್ತಾವಲ್ಲ ಹಾಂಗ ......" ಎಂದ ಮಾತಿಗೆ ತಾಯವ್ವನ ಪ್ರತಿಭಟನಾತ್ಮಕ ಉತ್ತರ "ಏ ಮಾಸ್ತರಾ ..... ಬಿಗಿ ಹಿಡ್ದು ಮಾತಾಡು ತಿಳಿತೇನು ನನಗೇನು ಗಂಡ ಇದ್ದಿದ್ದಿಲ್ಲೇನು ? ಬೆಳ್ಳಗಿದ್ರ ಹಾದ್ರ ಅಂತ ಬೆಳ್ಳಗಿರಾದು ಬರೇ ನಿಮ್ ಜಾತಿ ಗುತ್ತಾ ಏನು? ಮಾಸ್ತರಾ ....... ನಾ ಬಂಬೈದಾಗ ಇದ್ದು ಬಂದಕ್ಕಿ ತಿಳಿತೇನು. ಹಿಂಗೆಲ್ಲಾ ಅಡ್ಡಾದಿಡ್ಡಾ ಮಾತಾಡ್ದಿ ಅಂದ್ರ ಬಾಯಾಗಿನ ಹಲ್ಲ ಕಿತ್ತಿ ಕೈಯಾಗ ಕುಡ್ತೀನಿ ತಿಳಿತಿಲ್ಲೋ ಸುಮ್ಮ ಸುಮ್ಮನೆ ಸುಮಾರ ಮಾತಗೋಳು ಆಡಬ್ಯಾಡಂತೀನಿ .....[24]

"ಮತ್ತಾ ತಗದ್ಯಾ ನಿನ್ ಹಲ್ಕಾಬುದ್ದಿ ? ಯಾಕೋ ಮಾಸ್ತರ ....... ಸಾಲಿ ಕಲ್ಯಾದುನೂ ನಿಮ್ಮಂದಿಗ ಅಂತ ಬರಕೊಟ್ಟಾದೇನು ? ಸರಕಾರ ನಮ್ಮಂದಿಗೆ ಪುಕ್ಕಟೆ ಸಾಲಿ ಕಲಿಸ್ತಾನದಂಬೋದು ನಿನಗೆ ಗೊತ್ತಿಲ್ಲೇನೊ.... ಈಗ ನೀಯೆನು ಸೀದಾ ಸಾಫ್ ನನ್ ಮಗನಿಗೆ ಸಾಲಿ ಕಲಸವ್ನೋ ಇಲ್ಲೋ ಹೇಳು. ಇಲ್ಲಂದ್ರ ಈಗ ಸೀದಾ ನಾ ಗೌಡ, ಕುಕ್ಕಣ್ಣೀರ ಬಲ್ಲಿ ಹೋಗಿ ಕೇಳ್ತೀನಿ."[25] ಎಂಬ ತಾಳಿಯ ಸಮಾಜ ವಿರೋಧಿ ಮಾತುಗಳಾದರೂ ಸಮಾನತೆಯನ್ನು ಕೇಳುವಂತಹ ವ್ಯಕ್ತಿತ್ವವಿದೆ.

ಒಂದು ಹೆಣ್ಣಾಗಿ ಕೆಳಗಿನ ವರ್ಗದವಳಾದ ತಾಳಿಯ ಸಾಮಾಜಿಕ ಪ್ರತಿಭಟನೆ, ಇದು ಲೇಖಕಿ, ಸಮಾಜ ನೋಡುವ ದೃಷ್ಟಿಕೋನವೂ ಆಗಿದೆ. ಕೆಳವರ್ಗದ ಹೆಣ್ಣಿನ ಪರಿಸ್ಥಿತಿ ಮತ್ತು ಮನಃಸ್ಥಿತಿ ಈ ರೀತಿಯದಾದರೆ ಮೇಲ್ವರ್ಗದ ಹೆಣ್ಣಾದ ಮೈನಾಬಾಯಿಯ ವೈಚಾರಿಕ ಮನಸ್ಸು ಹೇಗಿದೆ ಎಂಬುದನ್ನು ಆಕೆಯ ಯೋಚನೆಗಳಿಂದಲೇ ತಿಳಿಯಬಹುದು. 'ಹೆಣ್ಣೀಗಿ ತಂದಿ, ಗಂಡಾ, ಮಗಾ ಎಲ್ಲೋರೂ ಛಂದ ಇದ್ದರೇ ಆಕಿನ ಬಾಳ್ವಾ ಹಸದ ಅಗ್ತದ್ರಿ ಯವ್ವಾ..... ಇಲ್ಲಂದ್ರ ಮೂರಾಬಟ್ಟೀನೇ ನೋಡ್ರೀ......" ಎಷ್ಟು ಸಂಕಟದಿಂದ ಆ ಮಾತು ಆಡಿದ್ಳು ತಾಯವ್ವ ದೊಡ್ಡಜಾತಿ ಮಂದಿ ಹತ್ತಿರ ಬೇಕಾದಷ್ಟು ಸಂಪತ್ತಿರ್ತದ,ಹೊಟ್ಟೀಗಿ ಬಟ್ಟೀಗಿ ಕಡಿಮೆ ಬೀಳೋರಿಲ್ಲ. ನಮ್ಮಂದ್ಯಾಗ ಓದಿದವರಿರ್ತಾರ. ಹೇಳಿಕೇಳಿ ಬ್ರಾಂಬ್ರು ಜಗಳಾ, ಹೊಡಿಬಡಿ ಅಂತ ಮಾಡುದಕ್ಕ ಗಂಡಸ್ರು ಹೆದರ್ತಾರ. ಭಾಳ ಭಾಳ ಅಂದ್ರ ಗಂಡ ಒಂದು ಶೂದ್ರ ಹೆಂಗ್ಸನ ಸೋಬ್ತಿ ಮಾಡಬೌದು ಹೆಂತಿ ಜಗಳಾ ಆಡಿದ್ರ ನಾಲ್ಕು ದಿನಾ ಮಾತು ಬಿಡಭೌದು. ಆದರ ಶೂದ್ರ ಗಂಡಂದಿರಂಗ ಹೊಡಿ ಬಡಿ ಮಾಡೂದಿಲ್ಲ. ಮನಿ ಬಿಟ್ಟು ಹೆಂತಿ ಮಕ್ಕಳಿಗೆ ಬಿಟ್ಟು ಓಡಿ ಹೋಗಿ ಮಾರಿ ತಪ್ಪಿಸೋದೋ

ಬಾಳ ಕಮ್ಮಿ. ಇಲ್ಲಂತೇ ಹೆಳ್ಬೇಕು. ಆದರೆ ಪಾಪ ಈ ಶೂದ್ರರು, ದಲಿತರು, ಹೊಲಿಮಾದಿಗ ಹೆಣ್ಣುಗಳ ಗತಿ ದೇವರೇ ಗತಿ. ನಮ್ಮ ಶಾಸ್ತ್ರಗೋಳದಾಗ ಹೇಳಿದ್ದಾಂಗ ಹೆಣ್ಣು ತಂದಿ, ಗಂಡ, ಮಗನ ನೆರಳಿನಲ್ಲಿಯೇ ಇರ್ಬೇಕು ಅಂದ್ರ, ಅದು ನಮ್ಮ್ಹಂತಾ ದೊಡ್ಡ ಜಾತಿ, ರೊಕ್ಕಾ ಇರಾಮಂದಿ, ಹೆಣ್ಣಗೋಳಿಗಿ ಹ್ಯಾಂಗರೆ ಸಾಧ್ಯಾ ಆದೆತ್ತು. ಆದರ ಬಡೂರ ಹೆಂಗಸ್ರಿಗಿ ಸಾಧ್ಯಾ ಆಗೋದೂ ದುರ್ಲಭ ಅನಿಸಿತು. ತಾಳಿಯನ್ನು ನೆನಪಿಸಿಕೊಂಡು ಛೇ..... ಈ ಹೆಣ್ಣಿನ ಬಾಳ್ಯಾಒಯ್ದು ಬೆಂಕಿಗೆ ಹಾಕಲಿ ಎನಿಸಿತು. ಹಾಗೆಯೇ ಬಡವರು ಹೊಲ ಮನ್ಯಾಗ ದುಡ್ದು ಹೊಟ್ಟೆ ತುಂಬಸಕೊಳ್ಳತಾರ. ಆ ಹೆಂಗಸರಿಗೆ ಗಂಡಿನ ಆಸರೆ ಇಲ್ಲದಿದ್ದರೂ ನಡೆಯುತ್ತದೆ ಆ ಸಣ್ಣ ಜಾತಿಯ ಶೂದ್ರ ಹೆಂಗಸರಕ್ಕಿಂತಾ ದೊಡ್ಡ ಜಾತಿಯ ತಮ್ಮಂಥ ಹಾರುವವರ ಹೆಂಗಸರೇ ಭಾಳ ಅಸಹಾಯಕರೇನೋ ಅಂಬೋ ಈಚಾರ ಬಂದ ಕೂಡಲೇ ಎದೆಯಲ್ಲಿ ಫಕ್ಕನೆ ಎಂಥದ್ದೋ ನೋವಿನ ಮುಳ್ಳೊಂದು ಗಿರ್ರನೆ ಗೀರಿಕೊಂಡು ಹೋಗಿ ರಕ್ತವಸರಿತು."[26] ಮೈನಾಬಾಯಿಯ ಮನಸ್ಸಿನಲ್ಲಿಯೇ ಪ್ರತಿರೋಧದ ಧ್ವನಿಯಿದೆ ಮತ್ತು ತನ್ನ ಗಂಡನ ದೌರ್ಬಲ್ಯತೆ ಹಾಗೂ ತಾನು ಪರಾವಲಂಬಿ ಎಂಬ ನೋವು ಆಕೆಗಿದೆ.

ಸಾಮಾಜಿಕ ವ್ಯವಸ್ಥೆಯಿಂದಾಗಿ ದಲಿತ ಸ್ತ್ರೀಯರಿಗೆ ಮಾತ್ರವೇ ನೋವಾಗುತ್ತಿಲ್ಲ ಮೇಲ್ವರ್ಗದ ಸ್ತ್ರೀಗೂ ಹಿಂಸೆ ಇದೆ ಎಂಬುದನ್ನು ತಿಳಿಸಲು ಮೈನಾಬಾಯಿಯ ಮಾತುಗಳೇ ಸಾಕ್ಷಿಯಾಗಿವೆ. ಎಲ್ಲಾ ರೀತಿಯ ಹಿಂಸೆಗೆ ಗುರಿಯಾಗಿರುವುದು ಹೆಣ್ಣಾಗಿರುವುದರಿಂದ ಲೇ ಎಂದು ಈ ಲೇಖಕಿಯು ದೃಷ್ಟಿಕೋನ ಹೇಳುತ್ತದೆಯಾದರೂ, ಆ ಹಿಂಸೆಯಲ್ಲಿಯೇ ವಿರುದ್ಧದ ಪ್ರತಿರೋಧದ ಧ್ವನಿಗಳು, ಮನಸ್ಸುಗಳು ಇವೆ ಎಂಬುದನ್ನು ಮರೆಯುವಂತಿಲ್ಲ. ಈ ಕಾದಂಬರಿಗಳಲ್ಲಿ ಸಮಾಜ ರೂಪಿಸಿರುವ ಕುಟುಂಬ ಶಿಥಿಲವಾಗಿದೆಯೇ ಹೊರತು ಅರ್ಥಪೂರ್ಣವಾಗಿಲ್ಲ. ತಾಯವ್ವ ಮತ್ತು ತಾಳಿಯ ಪಾತ್ರಗಳಲ್ಲಿ ಸ್ತ್ರೀ ಮತ್ತು ದಲಿತ ಸಂವೇದನೆಗಳೆರಡು ಇವೆ ಎಂಬುದು ಅವರ ಮಾತುಗಳಿಂದಲೇ ತಿಳಿದು ಬರುತ್ತದೆ.

**ಬದುಕು**

ಬದುಕು ಮಲ್ಲಪ್ಪ ಜಮಾದಾರನ ಕಥೆ ಎನಿಸಿದರೂ ಈ ಕಥೆಯನ್ನು ಹಲವಾರು ಪಾತ್ರಗಳು ಸೇರಿ ಬೆಳೆಸುತ್ತವೆ. ಬದುಕು ಬರಿಯ ಬದುಕಲ್ಲ ವಿಭಿನ್ನ ಬದುಕುಗಳ ದರ್ಶನವಾಗಿದೆ. ಇಂತಹ ದರ್ಶನಗಳನ್ನು ದರ್ಶಿಸಲು ಇಲ್ಲಿನ ಸಾಮಾಜಿಕ ನೆಲೆಯೆ ಮುಖ್ಯವಾಗಿದೆ. ಸ್ತ್ರೀ ಪಾತ್ರಗಳೇ ಮುಖ್ಯ ಎನಿಸುವಂತೆ ಕಂಡುಬಂದರೂ ಪುರುಷ ಪಾತ್ರಗಳು ಸಹ ಮುಖ್ಯವೇ ಆಗಿವೆ. ಪುರುಷ ಪ್ರಧಾನ ಸಮಾಜವೇ ಇಲ್ಲಿಯೂ ಅಧಿಕೃತವಾಗಿದ್ದು ಆ ಸಮಾಜ ನಡೆಸಿಕೊಳ್ಳುವ

ರೀತಿಯನ್ನು ಗಮನಿಸಬಹುದಾಗಿದೆ. ಸಾಮಾಜಿಕ ನೆಲೆಯಿಂದ ನಮಗೆ ಅನಿವಾರ್ಯ ಮತ್ತು ಅವಶ್ಯವೆನಿಸುವಂತಹ ಅಂಶಗಳು ಇವು ಬೆಳ್ಳಿ ಮತ್ತು ಕಲ್ಯಾಣಿಯರ ಬದುಕು, ಕಾಶಿ ಮಾರ್ತಾಂಡ ಮತ್ತು ಲಿಂಗರಾಜರ ಸಂಬಂಧ, ಮಲ್ಲಪ್ಪ ಮತ್ತು ಮಲ್ಲವ್ವನ ಸಂಸಾರ, ಜೋಗಿಣಿಯರು, ಎಲ್ಲಾ ಸನ್ನಿವೇಶಗಳಲ್ಲೂ ಸಹಾಯಕರಾಗಿ ಕಾಣಬರುವ ಹಾಲಪ್ಪ ಮತ್ತು ಶಾಣಮ್ಮ, ಜೋಗಿಣಿಯಾಗಿಯೇ ಆತ್ಮಹತ್ಯೆಗೆ ಮುಂದಾಗುವಂತಹ ನೀಲವ್ವ ಮತ್ತು ವ್ಯವಸ್ಥೆಯನ್ನು ವಿರೋಧಿಸುವ ತುಳಜಾ, ತನ್ನ ಗಂಡನ ಅತಿಯಾದ ಕಾಮುಕತೆಯಲ್ಲಿ ನರಳಿ ಸಾಯುವಂತಹ ಕಲ್ಲವ್ವ ಮತ್ತು ಹಳೆಯ ತಲೆಮಾರಿನ ನಾಗವ್ವಾಯಿ, ಮಲಕವ್ವಾಯಿ, ಈರವ್ವರ ಪಾತ್ರಗಳು ಮುಖ್ಯವೆನಿಸುತ್ತವೆ.

ಬೆಳ್ಳಿ ಮತ್ತು ಕಾಶಿಯರ ಬದುಕು ವಿಭಿನ್ನ ನೆಲೆಗಳಿಂದಲೇ ಕೂಡಿದೆ. ಬೆಳ್ಳಿ ಇರುವಂತಹ ವ್ಯವಸ್ಥೆಯಲ್ಲಿಯೇ ಜೀವನ ನಡೆಸುವುದು ಮತ್ತು ಆ ಜೀವನ ನಡೆಸುವುದಕ್ಕಾಗಿ ಪ್ರತಿಭಟನೆ ಮಾಡಿದರೆ ಕಾಶಿ ಸಂಪ್ರದಾಯಸ್ಥ ಸಮಾಜ ಹಾಕಿಕೊಟ್ಟ ನಿಯಮಗಳನ್ನು ಮೀರುತ್ತಾಳೆ. ಆದ್ದರಿಂದ ಈ ಎರಡೂ ವಿಭಿನ್ನ ಜೀವನದ ದರ್ಶನಗಳು ನಮಗೆ ಮುಖ್ಯ ಎನಿಸುತ್ತದೆ.

ಕಾಶಿ ಮದುವೆಯಾಗಿ ಮೂರು ವರ್ಷ ತನ್ನ ಗಂಡನೊಂದಿಗಿದ್ದು ನಂತರ ತನ್ನ ಪ್ರಿಯತಮನಾದ ಲಿಂಗರಾಜನ ತೋಟ ಸೇರಿದ ಮೇಲೆ ಮಲ್ಲಪ್ಪ ತನ್ನ ಮರ್ಯಾದೆಗೆ ಅಂಜಿ ನೀರಿನಲ್ಲಿ ಬಿದ್ದು ಸಾಯುತ್ತಾನೆ. ಈ ವಿಚಾರವನ್ನು ಕುರಿತು ಕಲ್ಯಾಣಿ ಮತ್ತು ತನ್ನ ವರ್ಗದ ಹೆಂಗಸರನ್ನು ಸಾಹುಕಾರರು ನಡೆಸಿಕೊಳ್ಳುವ ರೀತಿಯನ್ನು ಮುಕುಡಪ್ಪನ ಮಾತುಗಳಲ್ಲಿ ಕಾಣಬಹುದು.

"ಹೂಂ...ತ್ವಾಟದ ಮನ್ಯಾಗಿಲ್ಲದರೇನು ಊರಾಗಿನ ತನ್ನ ಮನ್ಯಾಗಿಲ್ಲೋ ತಾನೇನು ಅಂವ? ಮನೀಗಿ ಕರ್‍ಕೊಂಡು ಬಂದ್ರ ಅವನ ಹೆಂತಿ ಮೆಟ್ಟ ತಗೋತಾಳ ಕೈಯಾಗ ...ಇಲ್ಲಂದ್ರ ಬಿಟ್ಟೂ ತವರ ಮನೀಗಿ ಹೋಗ್ತಾಳ.....ಈ ಸಾವ್ಕಾರಗೋಳು ಯಾರು ತಮ್ಮ ಸಂಸಾರ ಹಾಳ ಮಾಡ್ಕೋ ಮಂಗಿಲ್ಲ ಮಕ್ಕಳು..... ಬಡೂ ಮಂದಿ ಸಂಸಾರ ಹಾಳ ಮಾಡಿ ಅವರ ಒಗತನ ಹರ್‍ಸಿ, ಅವರ್ದೆಂಡ್ರಿಗಿ ತಂದಿಟ್ಕೋತಾರ ಸೂಳ್ಯಾ ಮಕ್ಕಳು..."[27] ಎಂದು ಹೇಳಿದರೂ, ಅವನಾಡುವ ಈ ಮಾತಿಗೆ ಕಾರಣ ಏನೆಂದರೆ ಆತನ ಹೆಂಡತಿ ಚಂದ್ರಿ ಈತನನ್ನು ಬಿಟ್ಟುಭೀಮಳ್ಳಿ ಸಾವ್ಕಾರನ ಮನೆಗೆ ಹೋಗಿರುತ್ತಾಳೆ. ಇದೇ ನೋವಿನಿಂದ ಆತ ಕಾಶಿಯ ವಿಚಾರದಲ್ಲಿ ಹೇಳುವ ಮಾತನ್ನು ಕೇಳಬೇಕು "ಏ, ಅವರೇನು ಮಾಡ್ತಾರ ಬಿಡೋ ನಿನ್ನ ತಮ್ಮ ಸಂಸಾರ ಮುರ್‍ಕೊಂಡೂ ಇವರ

ಹಿಂದ ಓಡಿ ಬರ್ತಾರಲ್ಲ ...... ಆ ರಂಡೇರಿಗಿ ತಿಳಿಬೇಕು....... ಗಂಡುಳ್ಳ ಗರತಿ ಆಗಾದು ಬಿಟ್ಟು ಮಿಂಡಗಾರನ ರಂಡ್ಯಾಗ್ತಿನೆಂತ ಬರ್ತಾವಲ್ಲ ಸೂಳೇರೂ...... ಅವುಕ್ಕ ತೆಲಿಮ್ಯಾಲ ಮೆಟ್ಟಾಡಸ್ಬೇಕು ಇವರವ್ವನಾ"[28] ಎಂದು ಮೇಲ್ವರ್ಗದವರು ಹೆಣ್ಣನ್ನು ನಡೆಸಿಕೊಳ್ಳುವ ರೀತಿ ಒಂದು ಕಡೆಯಾದರೆ ಹೆಣ್ಣು ಅವರಿಗನುಗುಣವಾಗಿ ನಡೆದುಕೊಳ್ಳುವುದನ್ನು ಪ್ರಧಾನ ಸಮಾಜವೇ ನಿರೂಪಿಸಿದೆ.

ಹೀಗೆ ಹೇಳುವ ಮುಕುಡಪ್ಪಾ ಕಲ್ಯಾಣಿಗೆ "ಏ ಬಿಡೋ ...... ಏನ್ಹೇಳ್ತೆ ...... ಅವಗೊಬ್ಬ ಹರ್‍ಯಾದ ಮಗಾ ಹಾನಂತಲ್ಲ, ಈಟೆಲ್ಲಾ ಆಗ ತನಕಾ ಅಂವಾಯೇನು ಉದ್ದು ಹುರಿತಿದ್ದನೇನು ? ನನಗೆಲ್ಲಾ ಗೊತ್ತದಾ ಬಿಡು....... ಎಲ್ಲೋರೂ ಭಾಘಾತಿಲ್ಲಕ್ಕ ಬಿದ್ದಿರ್‍ತಾರ ಮಕ್ಕಳೂ ......"[29] ಎಂದ ಮಾತಿಗೆ ಅವನನ್ನು ಝಾಡಿಸಿ ನೂಕಿದ್ದೇ ಕಾರಣವೆಂಬಂತೆ ವಿಪರೀತವಾಗಿ ಕುಡಿದಿದ್ದ ಮುಕುಡಪ್ಪಾ ಸಾಯುತ್ತಾನೆ. ಇದರಿಂದಾಗಿ ಕಲ್ಯಾಣೀ ಜೈಲು ಸೇರಬೇಕಾಗುತ್ತದೆ. ಗಂಡ ಜೈಲು ಸೇರಿದ ಮೇಲೆ ಬೆಳ್ಳಿಗೆ ಅನೇಕ ಸಂಕಷ್ಟಗಳು ಎದುರಾಗತೊಡಗುತ್ತವೆ. ಕಲ್ಯಾಣಿ ಜೈಲಿನಲ್ಲಿದ್ದಾಗ ಅವಳ ವಿರಹದ ಮಾದರಿ ಇದು ಒಂದೊಂದು ರಾತ್ರಿ ಬೆಳ್ಳಿಗೆ ಪಟ್ಟಂತ ಎಚ್ಚರಾದ್ರೆ ಆಯ್ತು. ಮತ್ತೆ ಕಣ್ಣಿವೆ ಕೂಡುವುದೇ ಇಲ್ಲ. ಮನಸ್ಸು ಎಷ್ಟೆಲ್ಲಾ ಗಟ್ಟಿ ಮಾಡಿಕೊಂಡರೂ ಒಮ್ಮೊಮ್ಮೆ ಮೈ ಅವಳ ಮನಸಿನ ಮಾತು ಕೇಳದೆ ತಕರಾರು ತೆಗೆಯುತ್ತದೆ. ಅದರ ವಿರುದ್ಧ ಬಂಡು ಸಾರುತ್ತದೆ. ಬೆನ್ನ ಹುರಿಗೆ ಬೆಂಕಿ ಹತ್ತಿದಂಗಾಗಿ ಹಾಸಿಗೆಯಲ್ಲೇ ಚಡಪಡಿಸುತ್ತಾಳೆ.[30] ಬೆಳ್ಳಿಯ ಮೈಮನಸ್ಸುಗಳು ಇದಾದರೂ ಸಹ ಬೇಲಿಯಿಲ್ಲದ ಹೊಲ ಅಂದ್ರ ಹಾದಿ ಬೀದಿ ದನಗೋಳೆಲ್ಲಾ ಮೇಯಕ್ಕೆ ಬರ್ತಾವ ಅದೇ ರೀತಿ ಇಲ್ಲಿ ಈರಪಾಗಸೆಪ್ಪ ಒಲಿಸಿಕೊಳ್ಳುವ ಪ್ರಯತ್ನವನ್ನು ಮಾಡಿದಾಗ ಆಕೆ ಹೇಳುವುದಾದರೂ ಏನು. "ಯಪ್ಪ ಗೋಡ ..... ನೀ ನೋಡ್ದರ ನಮ್ಮಪ್ಪ ಇದ್ದಂಗಿದ್ದೀ ....... ನಿನ್ನಂಥವನ ಬಾಯಿಲಿಂದ ಹಿಂತಾ ಮಾತು ಬರಬಾರ್ದು. ನನ್ನ ವಾರಗಿ ಮಗಳಾಳಲ್ಲ ನಿನಗ ...... ತೆಗಿ ಅಕಾಡಿ ಏನು ಮಾಡಂತ ಆಡ್ತಿ...... ದಾರಿ ಬಿಡು ನಾ ಹೋಗ್ಬೇಕು....."[31] ಎಂದು ಪ್ರತಿರೋಧದ ಮಾತುಗಳನ್ನಾಡುತ್ತಾಳೆ. ಬೆಳ್ಳಿಯ ಮಾತುಗಳಲ್ಲಿ ದೇಹವೇ ಬೇರೆ ಮನಸ್ಸೇ ಬೇರೆ ಎಂಬುದನ್ನು ತಿಳಿಯಬಹುದು. ತನ್ನ ದೇಹವನ್ನು ನಿಯಂತ್ರಣದಲ್ಲಿಡುವ ಶಕ್ತಿ ಆಕೆಯಲ್ಲಿರುವುದು ಮೇಲಿನ ಮಾತಿನಿಂದ ತಿಳಿದುಬರುತ್ತದೆ.

ಹೆಣ್ಣು, ಎಲ್ಲಾ ಕಷ್ಟಗಳನ್ನು ಸಹಿಸಿಕೊಳ್ಳಬೇಕೆಂಬ ಮಾತು ನಾಗವ್ವಾಯಿ, ಮಲಕವ್ವಾಯಿ, ಈರಮ್ಮನ ಮಾತುಗಳು ಹೇಳುತ್ತವೆ. "ಹೆಣ್ಣಿನ ಜನುಮ ಭಾಳ ಕೋಡೆದಾನೆ ಮಗಾ......ಇದಕ್ಕೆ ಬೆಂಕಿ ಹಚ್ಚಲೇ...... ಒಮ್ಮಿ ಬದುಕು ಕೆಟ್ಟತಂದ್ರ ಮುಗೀತು...... ಮತ್ತದು ನುಸಿ ತಿಂದ ಕಾಳಿನಂಗ ಸೊಳ್ಳಾಗಿ ಬಿಡ್ತದ. ಮುಂದದು ಏನು ಮಾಡದರನೂ ಮತ್ತ ನಾಟಂಗಿಲ್ಲ ನಾಸಾಗಿ ಬೇಕಾರಾಗ್ತದ"

ಎಂಬ ನಿಟ್ಟುಸಿರಿನ ಮಾತುಗಳೇ ಗೀತಾರವರ ಎಲ್ಲಾ ಕಾದಂಬರಿಗಳಲ್ಲು ಪುನರಾವರ್ತನೆಯಾಗುತ್ತವೆ. ಇಷ್ಟೆಲ್ಲಾ ಪ್ರತಿರೋಧಗಳೊಂದಿಗೆ ತನ್ನ ಬದುಕನ್ನು ನಡೆಸುತ್ತಾ ಬಂದರೂ ಸಹ ತನ್ನ ಮಗ ಮಲ್ಲು ಮರಾಠಿ ಹುಡುಗಿಯನ್ನು ಮದುವೆಯಾಗುವುದು, ಶಿವು ಸನ್ಯಾಸಿಯಾಗುವುದರ ಮೂಲಕ ವ್ಯವಸ್ಥೆಯನ್ನು ವಿರೋಧಿಸಿದರೂ ಅಥವಾ ಬದಲಾಗಿ ನಡೆದರೂ ಬೆಳ್ಳಿ ಹೇಳುವ ಮಾತುಗಳಾದರೂ ಯಾವುದು ? "ಅದೇನಂತಾದ ಸನ್ಯಾಸಿ..... ಮದಿ ಬ್ಯಾಡಂತೇಳಿ ಅದೇನೋ ಆಸ್ರಮ್'ಂತ ಓಡ್ಯಾಡ್ತದವ್ವ, ಗಳಿಗಿ ಪುರಸತಿಗಿಲ್ಲ, ದಮ್ಮಡಿ ಆಮದನಿಯಿಲ್ಲ. ಅದೊಂದು ನನ್ನೊಟ್ಟ್ಯಾಗ ಹ್ಯಾಂಗ ಹುಟ್ಟಿತೋ ಸನ್ಯಾಸಿ...... ಅಂದಾನು ಕೈಗಿ ಹತ್ತಂಗಿಲ್ಲವ್ವ, ಇವುಕ್ಕ ನಾವು ಪಟ್ಟಣದಾಗಿಟ್ಟು ಸಾಲಿಕಲ್ಸಿದ್ದೇ ತಪ್ಪಾಯ್ತು ನೋಡು ಹಳ್ಳ್ಯಾಗಿಟ್ಟು ದುಡೀಲಕ್ಕ ಕಳ್ಸಿದ್ದರೇ ಬೇಸಿತ್ತು ನಮ್ಮ ಮನಿತನದ ರೀತಿ ರಿವಾಜು, ಪದ್ದತಿ ಶಾಸತ್ತರ ಅಂತ ನಾವು ಹೇಳಿದಂಗ ಕೇಳ್ಕೋತ ಅವ್ವ ಅಪ್ಪ ಹೊಲಾಮನಿ, ಊರಾಕೇರಿ ಅಂತ ಹಚ್ಗೊಂಡಿರ್ತಿದ್ದವು. ನಾಕು ಅಕ್ಕಸರೇನು ಕಲ್ತರು ನೋಡು ಅವರ ತೇಲೀನೆ ಕೆಟ್ಟು ಕ್ಯಾಸರಾಯ್ತು ! ಬುದ್ಧಿನೇ ಠಿಕಾಣಿ ತಪ್ಪಿತು" ಅಂದಳು. "ಸಾಲಿ ಕಲ್ತವರೆಲ್ಲಾ ಹಿಂಗೇ ಮಾಡ್ತರೇನು ಬಿಡು.....ಒಟ್ಟಿನ್ಯಾಗ ನಮ್ಮ ನಸೀಬ ಖೋಟ್ಟೆದಾ ಬಿಡು......"[32] ಎಂಬ ಬೆಳ್ಳಿಯ ಮಾತುಗಳಲ್ಲಿ ಸಾಂಪ್ರದಾಯಿಕತೆಯೇ ಇದೆ ಬೌದ್ಧಿಕತೆಯಿಲ್ಲವೆಂಬುದು ವ್ಯಕ್ತವಾಗದೆ ಇರಲಾರದು.

ಇದಕ್ಕೆ ಭಿನ್ನವಾದ ಮತ್ತೊಂದು ಪಾತ್ರವೆಂದರೆ ಕಾಶಮ್ಮನದು. ಈಕೆ ಮಾರ್ತಾಂಡನೊಂದಿಗೆ ವಿವಾಹವಾಗಿ ಮೂರು ವರ್ಷಗಳಿದ್ದು ಪ್ರಿಯತಮನಾದ ಲಿಂಗರಾಜನ ತೋಟದ ಮನೆಗೆ ಸೇರುವುದರ ಪ್ರತಿರೋಧ ನೀಡುತ್ತಾಳೆ. ವಿವಾಹ ಕುಟುಂಬವೆಂಬ ಸಾಮಾಜಿಕ ಸಂಸ್ಥೆಗಳು ಹಾಕಿರುವ ನಿಯಮಗಳಾದರೂ ಯಾವುದು ? ಒಂದು ಹೆಣ್ಣು ಒಂದು ಗಂಡಿಗೆ ದೈಹಿಕವಾಗಿ ಸೀಮಿತವಾಗಿರಬೇಕು ಎಂದು ವಿವಾಹವಾದರೆ, ಹೆಣ್ಣು ತನ್ನ ಕುಟುಂಬವನ್ನು ಹೆಚ್ಚಿಸಿಕೊಳ್ಳುವುದರ ಮೂಲಕ ತನ್ನ ಅಸ್ತಿತ್ವವನ್ನು ಕುಟುಂಬದಲ್ಲಿ ಗುರುತಿಸಿಕೊಳ್ಳಬೇಕೆಂಬ ಸಾಮಾಜಿಕ ನಿಯಮವನ್ನು ಹಾಗೂ ಜಾತಿಯನ್ನು ಮೀರಿ ಪ್ರತಿರೋಧ ಒಡ್ಡುತ್ತಾಳೆ. ಆದರೂ ಸಹ ಕೊನೆಯವರೆಗೂ ಲಿಂಗರಾಜನಿಗೆ ರಂಡೆಯಾಗಿಯೇ ಉಳಿಯುತ್ತಾಳೆಯೇ ಹೊರತು ಹೆಂಡತಿಯಾಗಲ್ಲ. ಅದಕ್ಕೆ ಕಾರಣವಾದರೂ ಏನೆಂದರೆ ನಮ್ಮ ಸಾಮಾಜಿಕ ವ್ಯವಸ್ಥೆಯೇ ಆಗಿದೆ.

ಕೈಕೆಯಿಂದ ರಾಮಾಯಣವಾದರೆ ಇಲ್ಲಿ ಕಾಶಿಯಿಂದ ನನ್ನ ಬದುಕು ಹೀಗಾಗುತ್ತಿದೆ ಎಂದು ಬೆಳ್ಳಿ ಅಂದುಕೊಳ್ಳುವುದು, ಮಲ್ಲಪ್ಪ-ಮಲ್ಲವ್ವರ ಸಾವು, ಕಲ್ಯಾಣಿಯ ಜೈಲುವಾಸಗಳಿಂದಾಗಿಯೇ ತನಗೆ ಕಷ್ಟ ಬಂದಿರುವುದೆಂದು ಬೆಳ್ಳಿಯ ಜೊತೆ ಅನೇಕರು

ಧನಿಗೂಡಿಸುತ್ತಾರೆ. ಇಂತಹ ಸಮಾಜಕ್ಕೆ ವಿರೋಧವಾಗಿ ನಡೆದುಕೊಂಡರೂ ಕಾಶಿ ಮತ್ತು ಮಾರ್ತಾಂಡನಲ್ಲಿನ ಮಾನವೀಯತೆಯ ಮಾತುಗಳು ಹೃದಯಂಗಮವಾಗಿ ಚಿತ್ರಣಗೊಂಡಿವೆ. ಫತರೂ ಮಾರ್ತಾಂಡ ಬಂದಿದ್ದಾನೆ ನಿನ್ನ ಜೊತೆ ಮಾತನಾಡಲು ಎಂದೇಳಿದಾಗ ಆಕೆಯ ಮನಃಪೂರ್ವಕ ಮಾತುಗಳಿವು "ಇದೆಂಥಾ ರಿಣಾನೋ ಯಣ್ಣಾ..... ನಾ ಅಂವಗ ಬ್ಯಾಡಂತ ಎಡಗಾಲಿಂದ ಒದ್ದು ಬಂದು ಈ ಸಾವ್ಕಾರನ ಮನಿ ಸೇರಿದರನೂ ಆ ಹುಚ್ಚಗೊಟ್ಟಿ ಮಾರ್ತಾಂಡ ನನ್ ಮ್ಯಾಲೇ ಜೀಂವಾ ಇಟ್ಗೊಂಡಾನಂದ್ರ ಇದಕ್ಕೇನನಬೇಕು..... ಯಾ ಜನ್ಮದ ರಿಣಾ ತೀರ್‍ಸಲಕತ್ತಾನೋ ಮಾರಾಯಾ..... ಬರ್ತಿನಿ ಇರು ಅಂತೆದ್ದಳು". ಈ ಕಾಶಮ್ಮನನ್ನು ನೋಡಿದ ಮಾರ್ತಾಂಡನ ಮಾತುಗಳಿವು "ಅಳಬ್ಯಾಡ ಕಾಶೀ...... ಯಾಕಳ್ತಿ ಆಂ ? ನಿನಲಿಂದ ಅಗಲಿ ನನಗ ಸಮಾಧಾನದಲಿಂದ ಬದುಕಲಿಕ್ಕೆ ಆಗಲಿಲ್ಲ. ಇದರಾಗ ನಾ ಸೋತು ಬಿಟ್ಟೀನಿ ನೋಡು....ನೀ ಅತ್ತರ ನನಗ ಭಾಳ ಸಂಕಟ ಆಗ್ತದೇ ಕಾಶೀ.... ಅಳಬ್ಯಾಡ...ನಿನ್ನ ನಗುಮಾರಿ ನೋಡಿ ಹೋಗಲಕ್ಕಂತ ನಾ ಬಂದೀನೀ....ಕಣ್ಣೀರಲ್ಲೇ ಕಾಶಿ......" ಎಂದಾಗ ಕಾಶಿಯ ಮಾತುಗಳಲ್ಲಿರುವ ಪಶ್ಚಾತ್ತಾಪದ ದನಿಗಳು ಈ ರೀತಿಯಾಗಿ ಹೊರಬರುತ್ತವೆ. "ನನಲಿಂದ ಆಗಲಿ ನೀ ಈಟು ಖರಾಬಾಗ್ತೆಂತ, ಬರ್ಬಾದಾಗ್ತೆಂತ ಗೊತ್ತಿದ್ದರೆ ನಾನಿನಗ ಬಿಟ್ಟು ಬಿಲ್‌ಕುಲ್ ಬರ್ತಿರಲಿಲ್ಲೋ ಮಾರ್ತಾಂಡಾ..... ಮಾಫ ಮಾಡಿ ಬಿಡೂ..... ನಂದೂ ಭಾಳ ದೊಡ್ಡ ತಪ್ಪಾಯ್ತು...... ಇದೇನು ನಿನ್ನ ಹಾಲತ ಮಾಡ್ಕೊಂಡಿದ್ದೀ......."[33] ಎಂದು ದುಃಖಿಸಿದಳು. ಅಲ್ಲದೇ ತನ್ನ ತವರು ಮನೆ ಹೀಗಾಗಲೂ ತಾನೇಯೇ ಕಾರಣ ಎಂದು ಸಹ ಅಂದುಕೊಳ್ಳುತ್ತಾಳೆ. ತನ್ನ ಅಪ್ಪ ಸತ್ತಾಗ ಹೆಣದ ಬಳಿ ಸೇರಿಸದಿದ್ದಾಗ ಅವಳು ವ್ಯವಸ್ಥೆಯನ್ನು ಮೀರಿದ್ದರೂ ಆ ವ್ಯವಸ್ಥೆಯಲ್ಲೇ ಸುರುಳಿಯಾಗಿ ಸುತ್ತುತ್ತಿದ್ದಾಳೆಯೇ ಹೊರತು ಮುಕ್ತಳಾಗಿಲ್ಲ. ಅವಳು ಬದುಕುತ್ತಿರುವುದಾದರೂ ಯಾವ ರೀತಿ ಗಂಡಾ ಹೆಣ್ತೀದು ಏಳೇಳು ಜನುಮದ ಸಮ್ಮಂಧ್ಧಂತ ಅಂತಾರಲ್ಲ, ಎಲ್ಲಾ ಸುಳ್ಳಗೊಳ್ಳ, ಪಿರೀತಿ ಸಮ್ಮಂಧದ ಮುಂದೆ ಈ ಮದವಿ ಸಮ್ಮಂದಂಬಾರು ಕಾಸಿನ ಕಿಮ್ಮತ್ತಿಲ್ಲದ್ದು ಎಂಬ ವಾಸ್ತವತೆಯ ಜೀವನವೇ ಕಾಶಿಯದ್ದಾಗಿದೆ.

ಮಲ್ಲಪ್ಪ-ಮಲ್ಲವ್ವರ ಸಂಸಾರದಲ್ಲಿ ಮಲ್ಲವ್ವಳಿಗೆ ಮಕ್ಕಳಾದ ಮೇಲೆಯೇ ಹೊಡೆತ-ಬಡಿತ ತಪ್ಪಿಸಿಕೊಂಡೂ ಕುಟುಂಬದ ಸದಸ್ಯೆಯಾಗಿ ಕೊನೆಗೆ ಗಂಡ ಸತ್ತ ನಂತರ ಮಾನಸಿಕ ಅಸ್ವಸ್ಥಳಾಗಿ ಸಾಯುತ್ತಾಳೆ. ಮಲ್ಲಪ್ಪ ಮಗಳಾದ ಕಾಶಿ ಲಿಂಗರಾಜನೊಂದಿಗಿರುವುದಕ್ಕೆ ಸಾಯುತ್ತನಾದರೂ ತಾನು ಮೊದಲು ಜೋಗಿಣಿಯರ ಹತ್ತಿರ ಇದ್ದದ್ದು ಮತ್ತು ಈರವ್ವನೊಂದಿಗಿನ ಸಂಬಂಧಗಳನ್ನು ಯಾವುದೂ ನೆನಪಿಸಿಕೊಳ್ಳುವುದಿಲ್ಲ ಏಕೆ? ಹೆಣ್ಣು ವ್ಯವಸ್ಥೆ ಮೀರುವಾಗ ಅದನ್ನು ವಿರೋಧಿಸುವ

ಮಲ್ಲಪ್ಪ ತಾನು ಮಾಡುವುದಾದರೂ ಸರಿಯೆಂದು ಆತ್ಮವಿಮರ್ಶೆ ಮಾಡಿಕೊಳ್ಳುವುದಿಲ್ಲವೇಕೆ? ಪುರುಷ ಪ್ರಧಾನ ಸಮಾಜವೇ ಕಾರಣವಾಗಿದೆಯೇ? ಈ ಸಮಾಜದಲ್ಲಿ ಪುರುಷನಿಗೆ ತನ್ನ ಹಿತವೇ ಕಾರಣವಾಗಿದೆ. ಆದರೆ ಹೆಣ್ಣಿನ ಹಿತ ಈ ಸಮಾಜದಲ್ಲಿಯೇ ಇಲ್ಲ. ಗಂಡು ಏನೇ ಮಾಡಿದರೂ ಪ್ರತಿಷ್ಠೆಯೆನ್ನುವ ಸಮಾಜ ಹೆಣ್ಣು ಏನೇ ಮಾಡಿದರೂ ತಪ್ಪು, ಕೆಟ್ಟದೆನ್ನುವುದು ಯಾಕೆ? ಎಂದು ಏನೆಲ್ಲಾ ಪ್ರಶ್ನೆಗಳನ್ನಾಕಿದರೂ ಸಹ ಸಿಗುವ ಉತ್ತರ ಒಂದೇ ಅದೇ ಪುರುಷ ಪ್ರಧಾನತೆ.

ನಮ್ಮ ಸಮಾಜ ಕುಟುಂಬ, ವಿವಾಹದಂತಹ ಸಂಸ್ಥೆಗಳ ಜೊತೆಗೆ ಧರ್ಮ ಎಂಬುದನ್ನು ಸ್ಥಾಪಿಸಿದೆ. ದಯೆಯೇ ಧರ್ಮದ ಮೂಲವಯ್ಯಾ, ದಯೆಯಿಲ್ಲದ ಧರ್ಮವಾವುದಯ್ಯಾ ಎಂಬ ಬಸವಣ್ಣನವರ ಮಾತಿಗೆ ಬದಲಾಗಿ ಧರ್ಮ ಹೆಣ್ಣನ್ನು, ಸ್ವೇಚ್ಛೆಯಾಗಿ ಬಳಸಿಕೊಳ್ಳುವಲ್ಲಿ ಅತ್ಯಂತ ಮುಖ್ಯವಾದ ಸಾಧನವಾಗಿದೆ. ದೇವತೆ ಎಂದು ಹೆಣ್ಣನ್ನು ದೇವತೆಗೆ ಸಮೀಕರಿಸುವ ಈ ಸಮಾಜವು ದೇವರ ಹೆಸರಿನಲ್ಲಿ ಅಮಾನವೀಯವಾಗಿ ಬಳಸಿಕೊಳ್ಳಲಾಗುತ್ತಿದೆ. ನೀಲವ್ವ ಜೋಗಿಣಿಯಾಗುವುದಿಲ್ಲ ಎಂದು ಹೇಳಿದರೂ ಆಕೆಯನ್ನು ಜೋಗಿಣಿಯನ್ನಾಗಿ ಮಾಡುತ್ತಾರೆ. ಜೋಗಿಣಿ ಎಂದರೆ ಮಾಪುರ ತಾಯಿ ದೇವಿಯ ಸೇವಾಕ್ಕೆ ಪೂರಾ ಮೀಸಲಾದ ಹೆಣ್ಣು. ಅವಳು ಸಾಯುವವರೆಗೂ ಬೇರೆ ಮದುವೆಯಾಗುವಂತಿಲ್ಲ. ಪಟ್ಟಕ್ಕೆ ಹಾಕಿಕೊಂಡ ಗೌಡನೋ, ಕುಲಕರ್ಣಿಯೋ, ಸಾವ್ಕಾರನೋ ಅವಳಿಗೆ ಸೀರೆ, ಕುಪ್ಪಸ, ಬಂಗಾರದ ಒಡವೆ, ವಸ್ತ್ರ, ತಾಳಿ ಸಾಮಾನು, ಹಸುರಬಳೆ, ಕಾಲುಂಗುರ ಮೊದಲಾದ ಎಲ್ಲವನ್ನು ಕೊಡಬೇಕು ಅವಳಿಗೆ ಸುರಿಗೆಸುತ್ತಿ ಮೀಯಿಸಿ, ಅವಳ ಎಡಕ್ಕೆ ಒಂದು ತಲವಾರ(ಕತ್ತಿ) ಇಟ್ಟು ಅದನ್ನೇ ಗಂಡನೆಂದು ಸಿಂಗರಿಸಿ ಅದರೊಂದಿಗೆ ಅವಳ ಮದುವೆಯ 'ಚಾಜ'ಗಳೆಲ್ಲ ಮಾಡಿ ತಾಳಿ ಕಟ್ಟುತ್ತಾರೆ. ತಲೆಯ ಮೇಲೆ ಬಿದಿರ ಬುಟ್ಟಿಯಿಂದ ಪರಡಿ ಹೊರಿಸುತ್ತಾರೆ. ಬಗಲಲ್ಲಿ ಚೌಡಕಿ ಕೊಡುತ್ತಾರೆ. ಮುಗಿಯಿತು, ಅಂದಿನಿಂದ ಅವಳು ಚುಂಚೂರು ಮಾಪುರ ತಾಯಿಯ ಜೋಗಣಿಯಾಗುತ್ತಾಳೆ. ಅಂದು ರಾತ್ರಿ ಪಟ್ಟಕ್ಕೆ ಹಾಕಿಕೊಂಡನು ಅವಳ ಮೈಯ ಮೀಸಲು ಮುರಿದು, ಕನ್ಯತನ ಕಳೆದು ಅವಳನ್ನ ಹೆಣ್ಣು ಮಾಡುತ್ತಾನೆ ಅಷ್ಟೇ ಮುಂದೆಲ್ಲ ಅವಳು ದೇವಿಯ ಹೆಸರಿನ ಮೇಲೆ ಬಂದ ಗಂಡಸರಿಗೆಲ್ಲಾ ಸೆರಗು ಹಾಸುತ್ತ ಅವರ ಮಗ್ಗಲು ಬಿಸಿ ಮಾಡುತ್ತ ಅವರ ಕಾಮದ ತಿಂಡಿಗೆ ಬಲಿಯಾಗುತ್ತ ದಿನ ಗಳೆಯಬೇಕು. ಅವಳಿಗೆ ಹುಟ್ಟುವ ಮಕ್ಕಳಿಗೆ ತಂದೆಯ ಹೆಸರಿಲ್ಲ, ತಾಯಿಯದೇ ಹೆಸರು. ಅವಳು ಅಧಿಕೃತವಾಗಿ ಸೂಳೆಯಾಗುತ್ತಾಳಷ್ಟೇ. ಧಂದೇ ಆದೇ ಹೆಸರು ಮಾತ್ರ ಸೂಳೆಯಲ್ಲ 'ಜೋಗಣಿ'! ಹೆಣ್ಣಿಗೆ ಇಂತಹ ವ್ಯವಸ್ಥೆಯನ್ನು ಕಟ್ಟಿಕೊಡುವ ಸಮಾಜ ಆಕೆಯನ್ನು ಲೈಂಗಿಕವಾಗಿ ಬಳಸಿಕೊಳ್ಳುವ ಹುನ್ನಾರನ್ನು ಹೂಡಿದೆ. ಬಂದವರಿಗೆಲ್ಲಾ ದೇವರ ಹರಕೆಯ ಚಪ್ಪಲಿಗಳೆಂದು ಹಣೆಗೊತ್ತಿಕೊಂಡು

ಸೆಣ ಮಾಡಿ "ತಾಯೀ ನಮ್ಮವ್ವ ಮಾಯಕಾರ್ತಿ ಚುಂಚೂರು ಮಾಪುರೀ...... ನಮಗ ಸುಕ ಸಂತೋಷದಾಗ ಇಡೇ ನಮ್ಮವ್ವಾ, ನಮ್ಮನ್ಯಾಗ ಸಂಪತ್ತು ಬಂದು ಹಾಲಕ್ಕಿ ಹಳ್ಳ ಹರೆಂಗ ಮಾಡೇ ತಾಯೀ...... ನಮ್ಮ ಮಕ್ಕಳಿ ಮೊಮ್ಮಕ್ಕಳಿಗೀ ನೂರೊರ್ಸ ಆಯಸ್ಸು ಕೊಟ್ಟು ಕಾಪಾಡು ನಮ್ಮವ್ವಾ ......"[34] ಎಂದು ಚಪ್ಪಲಿಗಳನ್ನು ತಮ್ಮ ಗಲ್ಲ, ತಲೆ, ಹಣೆಗಳಿಗೆ ಬಡಿದುಕೊಳ್ಳುವಂತಹ ಮೂಢ ಸಮಾಜವಿದೆ.

ಮಗಳು ಜೋಗಿಣಿಯಾದರೆ ಒಳ್ಳೆಯದೇ ಎಂದುಕೇಳುವಂತಹ ಮಲ್ಲವ್ವ ಆಕೆಯ ಹಣೆಯ ಬರಹ ಇದ್ದ ಹಾಗೆ ಆಗಲಿ ಎನ್ನುತ್ತಾಳೆ. ವಿಧಿ ಒಂದು ಕಡೆಯಾದರೆ ದೇವರ ಮೇಲಿನ ಭಯದಿಂದಲೂ ಆ ಮಾತನ್ನು ಮಲ್ಲವ್ವ ಆಡುವುದಿಲ್ಲ. ಜನ್ಮವಿತ್ತ ತಂದೆ ತಾಯಿಯರೇ ಮಗಳನ್ನು ಜೋಗಿಣಿಯಾಗಿ ಮಾಡುವಂತೆ ಈ ಸಮಾಜ ಪ್ರೇರಣೆ ನೀಡಿದೆಯಾದರೂ ತಮಗಾಗಿ ತಮ್ಮ ಮಗಳನ್ನು ಈ ಧಂದೆಗಿಳಿಸುವರು, ಇವರು ನಿಜವಾದ ತಂದೆತಾಯಿಗಳೇ? ಒಲ್ಲದ ಮನಸ್ಸಿನಿಂದ ನೀಲವ್ವ ಜೋಗಿಣಿಯಾಗಿ ಬಾವಿಗೆ ಬಿದ್ದು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಜೋಗಿಣಿಯನ್ನಾಗಿ ಮಾಡಿದ ಈ ವ್ಯವಸ್ಥೆ ಆಕೆ ಸತ್ತ ಮೇಲಾದರೂ ಹೇಳುವುದೇನು ? ನೀಲವ್ವನ ಆತ್ಮಹತ್ಯೆ ಅಸಹಾಯಕತೆಯ ರೀತಿಯಲ್ಲಿ ಪ್ರತಿಭಟನೆಯೇ ಆಗಿದೆ. ಇಂತಹದ್ದೇ ಆನಂದರವರ ನಾನು ಕೊಂದ ಹುಡುಗಿ ಕಥೆಯಲ್ಲಿಯೂ ಅಲ್ಲಿ ಬರುವಂತಹ ದೇವದಾಸಿ ಲೇಖಕರು ಹೇಳಿದಂತೆ ವೈಚಾರಿಕ ಮಾತನ್ನು ಕೇಳಿ ಆತ್ಮಹತ್ಯೆಯನ್ನು ಮಾಡಿಕೊಳ್ಳುವ ಮೂಲಕ ವ್ಯವಸ್ಥೆಯನ್ನು ವಿರೋಧಿಸುವುದನ್ನು ಕಾಣಬಹುದು.

ನೀಲವ್ವ ವ್ಯವಸ್ಥೆಗೆ ವಿರುದ್ಧವಾಗಿ ಆತ್ಮಹತ್ಯೆಯ ಮೂಲಕ ಪ್ರತಿಭಟಿಸಿದರೆ ಜೋಗಿಣಿಯಾದಂತಹ ತುಳಜಾ ಹುಸೇನಪ್ಪನನ್ನು ಮದುವೆಯಾಗಿ ಒಂದು ಮಗುವಿನೊಂದಿಗೆ ಊರಿಗೆ ಬರುತ್ತಾಳೆ. ನ್ಯಾಯ ಪಂಚಾಯ್ತಿ ಮಾಡಿ ಆಕೆಯನ್ನು ಹೀನಾಯವಾಗಿ ಸಮಾಜ ನೋಡಿದಾಗ ಅವಳು ಅಪ್ಪ ಅವ್ವನೊಂದಿಗೆ ಊರನ್ನೇ ಬಿಟ್ಟು ಹೋಗುತ್ತಾಳೆ. ತುಳಜಾಳ ಈ ವೈಚಾರಿಕತೆಗೆ ಹುಸೇನಪ್ಪ ಮತ್ತು ನಿಂಬೆವ್ವರ ಮಾತುಗಳೇ ಆಗಿವೆ. ನಿಂಬೆವ್ವ ತಾನು ಒಬ್ಬ ಜೋಗಿಣಿಯಾಗಿದ್ದುಕೊಂಡು ತುಳಜಾಳಿಗೆ ಹೇಳುತ್ತಾಳೆ. ದೇವರು ಪೂಜಾರಿಯ ಮೇಲೆ ಬರುವುದು ಸುಳ್ಳು ಕುಲಕರ್ಣೀ, ಸಾವ್ಕಾರ ಹೇಳಿದಂಗ ಪೂಜಾರಿ ಕೇಳುತ್ತಾನೆ. ಇಲ್ಲಿ ಪೂಜಾರಿ ಉಳ್ಳವರ ಮತ್ತು ಇಲ್ಲದವರ ನಡುವಿನ ಆಟಿಕೆಯಾಗಿದ್ದಾನೆ. ದೇವರು ಬಂದಿದೆಯೆಂದು ದೇವರ ಹೆಸರಿನಲ್ಲಿ ನಡೆಯುವ ಮೋಸ ಎಂದು ಹೇಳಿದರೂ, ತುಳಜಾ ಜೋಗಿಣಿಯಾಗುವುದು ಸಮಾಜದ, ಹಳ್ಳಿಯ ರೀತಿ ರಿವಾಜುಗಳಿಂದಾಗಿಯೇ ಆಗಿದೆ ಎಂಬುದನ್ನು ಹುಸೇನಪ್ಪನೊಂದಿಗಿನ

ಅವಳ ಮಾತುಗಳಿಂದಲೇ ಕೇಳಬೇಕು. ಅದ್ಯಾಂಗ್ರೀ ಈ ಊರಾಗಿದ್ದು ಜೋಗಣಿ ಆಗಿದ್ದ ನಾನು ಈ ಧಂದಾ ಮಾಡಂಗಿಲ್ಲಂದ್ರ ಇಲ್ಲೀ ಗಂಡಸರು ಬಿಡಂಗಿಲ್ರೀ....ಊರ ಮಂದಿಗೂ ಇದಕ್ಕೆ ಒಪ್ಪಂಗಿಲ್ರೀ.... ಮತ್ತೆ ನಾಹ್ಯಾಂಗ್ತ ಬದುಕ್ಬೇಕು......[35] ಹೆಣ್ಣನ್ನು ಅಸಹಾಯಕಳಾಗಿ ಮಾಡಿದ ಸಮಾಜ ಈ ರೀತಿ ಧರ್ಮದ ಹೆಸರಿನಲ್ಲಿ ಆಕೆಗೆ ಕಟ್ಟುಪಾಡುಗಳನ್ನು ವಿಧಿಸುತ್ತದೆ.

ಇಂತಹ ಸಮಾಜ ಜೋಗಿಣಿಯನ್ನು ನೋಡಿ ಹೇಳುವುದಾದರೂ ಎನು ?

"ಹುವ್ವಿನಂಥಾ ಗಲ್ಲದಕ್ಕಿ
ಹಿಡಕಿ ತುಂಬೋ ಮಲಯಕ್ಕೀ
ಕಣ್ಣಿನಿಂದೇ ಕರೀತಾಳಲ್ಲೋ
ಪೋರಿ ಸಣ್ಣ ಟೊಂಕದಕ್ಕಿ...."[36] ಎಂಬುದೇ ಆಗಿದೆ.

ಮದುವೆಯಾಗದೆ ಗಂಡು ಹೆಣ್ಣು ಸಂಬಂಧ ಬೆಳೆಸಲು ಸಮಾಜ ಒಪ್ಪಿಗೆ ನೀಡಿದ ಸಂಸ್ಥೆಗಳೆಂದರೆ ಜೋಗತಿಯರು, ಪಾತರದವರು, ಬಸವಿಯರು, ಸೂಳೆಯರು. ಜೋಗತಿಯರಲ್ಲಿ ಪ್ರಚಲಿತವಿರುವ ಅನೇಕ ಸಂಪ್ರದಾಯ ಆಚರಣೆಗಳಲ್ಲಿ ಮಾತೃಪ್ರಧಾನ ಮೌಲ್ಯಗಳೂ ಇಂದಿಗೂ ಉಳಿದುಕೊಂಡು ಬಂದಿದೆ. ಆದರೆ ವಾಸ್ತವದಲ್ಲಿ ಅದು ಪ್ರಧಾನ ಸಮಾಜದ ಉದ್ದೇಶಗಳ ಜೊತೆಗೆ ಹೊಂದಿಕೊಂಡಿದ್ದು, ಪುರುಷ ಪ್ರಧಾನ ಸಮಾಜವೇ ಜೋಗಿಣಿ ಮತ್ತು ಸೂಳೆಯರನ್ನು ಹುಟ್ಟುಹಾಕಿ ಅಧಿಕೃತ ಸಂಸ್ಥೆಗಳನ್ನಾಗಿಸಿವೆ.

ವೈವಿಧ್ಯವನ್ನು ಚೆನ್ನಾಗಿ ಅರಿತಷ್ಟು ಏಕತೆಯನ್ನರಿಯುವುದು ನಮಗೆ ಸುಲಭ ಎಂದು ಸ್ಪಿನೋಜ ಹೇಳಿದ್ದಾನೆ. ಮಹಿಳೆ ಮತ್ತು ಧರ್ಮದ ವಿಚಾರದಲ್ಲಿ ಈ ಮಾತು ನೂರಕ್ಕೆ ನೂರುಪಾಲು ಸತ್ಯ. ಮಹಿಳೆ ಮಾನವ ಪ್ರಗತಿ ವಿಕಾಸಗಳಲ್ಲಿ ತನ್ನ ನೂರಾರು ಬಗೆಗಳಿಂದ, ಬಲಗಳಿಂದ, ಜೀವನದ ಪ್ರವಾಹವನ್ನು ಹರಿಸಲು ನೆರವಾಗಿದ್ದಾಳೆ. ಧರ್ಮವಾದರೂ ತನ್ನ ಅನೇಕ ಶಾಖೋಪಶಾಖೆಗಳಿಂದ ವಟವೃಕ್ಷದಂತೆ ಚಿರಸ್ಥಾಯಿಯಾಗಿದೆ. ಇಂಥ ವೃಕ್ಷದ ಬೇರಿಗೆ, ಬೆಳವಣಿಗೆಗೆ ಅಂತರ್ಗತವಾಗಿ ನೀರೆರೆಯುವವಳೂ, ನಿರುಡೀಸುವವಳೂ ಆರ್ಯ ಮಹಿಳೆ ಅಂದರೆ ಎಲ್ಲಿ ಧರ್ಮವು ಗೋಚರಿಸುವುದೋ ಅಲ್ಲಿ ಮಹಿಳೆ ಅಂತರ್ಗಾಮಿಯಾಗಿ ಮಾತೃ ಸದೃಶವಾದ ಮಮತೆಯಿಂದ, ಅದರ ಲಾಲನೆ, ಪಾಲನೆಗಳಲ್ಲಿ ತೊಡಗಿರುತ್ತಾಳೆಂಬುದು ವೇದದಷ್ಟೇ ಸತ್ಯ. ಮಹಿಳೆ ತನ್ನತನದಿಂದ ಧರ್ಮವನ್ನು ಹೀಗೆ ಉಳಿಸಿ ಬೆಳೆಸಿಕೊಂಡು ಬಂದಾಗ ಧರ್ಮವೂ ಅವಳ ಸ್ತ್ರೀ ಧರ್ಮವನ್ನು ರೂಪಿಸಿ, ರಕ್ಷಿಸಿಕೊಂಡು ಬರುತ್ತದೆ ಎನ್ನುವ ನುಡಿ ಅತ್ಯಂತ ಸೂಕ್ತವೆನಿಸುತ್ತದೆ.[37] ಪ್ರಭಾಮಣಿಯವರ ಮಾತನ್ನು ಗಮನಿಸಿದಾಗ ಹಾಗಾದರೆ ಸ್ತ್ರೀಗೂ

ಧರ್ಮವಿರುತ್ತದೆ. ಪುರುಷನಿಗೆ ಧರ್ಮವಿರುವುದಿಲ್ಲವೇ ? ಧರ್ಮ ಸ್ತ್ರೀಯನ್ನು ರಕ್ಷಿಸಿದರೆ ಧಾರ್ಮಿಕತೆಯ ಹೆಸರಲ್ಲಿ ಹೆಣ್ಣಿನ ಶೋಷಣೆ, ದೇವದಾಸಿ ಪದ್ಧತಿ ಏಕೆ ನಡೆಯುತ್ತಿತ್ತು ಎಂಬ ಪ್ರಶ್ನೆ ನನ್ನದಾಗಿದೆ.

ಕೆಳವರ್ಗದಲ್ಲಿ ಹೆಣ್ಣಾಗಿ ಹುಟ್ಟಿರುವುದರಿಂದ ಕಲ್ಲವ್ವ ತನ್ನ ಗಂಡನ ಅತಿಕಾಮುಕತೆಯಿಂದಾಗಿ ಬಲಿಯಾಗುವುದು ಪುರುಷ ಪ್ರಧಾನತೆಯೇ ಆಗಿದೆ. ದೇಹ/ಹೆಣ್ಣು, ಸ್ತ್ರೀತ್ವ, ತಾಯ್ತನ, ಜೋಗಿಣಿಯರಾಗಿಯೇ ಈ ಕಾದಂಬರಿಗಳಲ್ಲಿ ಹೆಣ್ಣನ್ನ ಪ್ರತಿನಿಧಿಕರಣಗೊಳಿಸಲಾಗಿದೆ. ಈಳಿಗೇರ ಸಾಬಯ್ಯ–ನಾಗವ್ವಾಯಿ, ಮಲ್ಲಪ್ಪ–ಈರವ್ವರಂಥಹ ಸಂಬಂಧಗಳು ಇಂದಿನದಲ್ಲ ಮೊದಲಿನಿಂದಲೂ ನಡೆದುಕೊಂಡು ಬಂದಿರುವುದೆಂದು ತಿಳಿಸುತ್ತವೆ. ವ್ಯವಸ್ಥೆಯನ್ನು ಮುರಿದು ಹೊರಗೆ ಬಂದರೂ ಅದೇ ವ್ಯವಸ್ಥೆಯಲ್ಲೇ ಸಿಲುಕಿ ನರಳುವುದು ಇವರ ಕಾದಂಬರಿಗಳಲ್ಲಿದೆ ಎನ್ನಬಹುದು ಮತ್ತು ಸಮಾಜ ರೂಪಿಸಿರುವ ದಾಂಪತ್ಯ, ಕುಟುಂಬ ವಿವಾಹಗಳೆಲ್ಲಾ ಅಪರಿಪೂರ್ಣವಾದವುಗಳೇ ಆಗಿವೆ.

ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣನ್ನು ಮತ್ತು ಹೆಣ್ಣಿನ ಸಮಸ್ಯೆಗಳನ್ನು ಆದರ್ಶ ನೆಲೆಯಿಂದ ವೈಭವೀಕರಿಸುವುದು ಅಥವಾ ಪ್ರತಿನಿಧೀಕರಣಗೊಳಿಸುವುದು ಪರಂಪರೆಯ ಸಾಂಪ್ರದಾಯಿಕ ಮೌಲ್ಯಗಳಿಂದಲೇ ಮತ್ತು ಊರುಗೋಲಿನಿಂದಲೇ ಅಳೆಯುವುದು ಯಥಾಸ್ಥಿತಿವಾದದ ಮುಂದುವರಿಕೆಯಾಗಿ ಗೀತಾನಾಗಭೂಷಣರ ಕಾದಂಬರಿಗಳಲ್ಲಿ ಕಂಡುಬಂದಿವೆ. ಈ ಸಾಮಾಜಿಕ ವ್ಯವಸ್ಥೆಯ ಕ್ರೌರ್ಯಗಳಿಗೆ ಬಲಿಯಾದ ಜನರು ಪ್ರತಿಭಟಿಸುವ, ನೇರವಾಗಿ ಸಂಘರ್ಷಕ್ಕೆ ನಿಲ್ಲುವ ಸಾಮರ್ಥ್ಯವನ್ನು ಹೊಂದದೇ ಹೋಗಿರುವುದರಿಂದ ಅವರ ಅಂತರಾಳದ ನೋವು, ಆಕ್ರೋಶಗಳು ಅಸಹಾಯಕತೆಯ ಹಿನ್ನೆಲೆಯಲ್ಲಿ ಹರಿದು ಬಂದಿವೆ. ಈ ಅಸಹಾಯಕತೆಯ ಕುದಿತ ಗಟ್ಟಿಗೊಂಡು ಪ್ರತಿಭಟನೆಯ ಸ್ವರೂಪ ತಳೆದದ್ದು ಬದಲಾವಣೆಗಾಗಿಯೇ ನಡೆದ ಸನ್ನದ್ಧತೆಯೆನ್ನಬಹುದು.

**ಅಡಿ ಟಿಪ್ಪಣಿಗಳು**

1. ಮಲ್ಲಿಕಾ ಘಂಟಿ, ದಲಿತ ಬಂಡಾಯ ಸಾಹಿತ್ಯದಲ್ಲಿ ಬದಲಾವಣೆಯ ಆಶಯ ಮತ್ತು ಸ್ತ್ರೀ, ಪುಟ–169, (ಸ್ತ್ರೀ ಸಂವೇದನೆಯ ಸ್ವರೂಪ– ವಿವಿಧ ಲೇಖಕರು)
2. ರಾಜಪ್ಪ ದಳವಾಯಿ : ದಲಿತ ಮತ್ತು ಬಂಡಾಯ ಸಾಹಿತ್ಯದಲ್ಲಿ ಸಂಸ್ಕೃತಿ ಮತ್ತು ಸೃಜನಶೀಲತೆ (ಕನ್ನಡ ಸಾಹಿತ್ಯದಲ್ಲಿ ಪ್ರದಾನ ಮತ್ತು ಅಧೀನ ಸಂಸ್ಕೃತಿ – ವಿವಿಧ ಲೇಖಕರು)
3. ಗೀತಾ ನಾಗಭೂಷಣ : ಹಸಿಮಾಂಸ ಮತ್ತು ಹದ್ದುಗಳು, ಪುಟ–15
4. ಅದೇ, ಪುಟ–17
5. ಅದೇ, ಪುಟ–12
6. ಅದೇ, ಪುಟ–49
7. ಅದೇ, ಪುಟ–50
8. ಅದೇ, ಪುಟ–36
9. ಶ್ರೀಮತಿ.ಎಚ್.ಎಸ್ : ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಪುಟ 379
10. ಗೀತಾ ನಾಗಭೂಷಣ : ಆಸರೆಗಳು, ಪುಟ–1
11. ಅದೇ, ಪುಟ–11
12. ಅದೇ, ಪುಟ–3
13. ಅದೇ, ಪುಟ–4
14. ಅದೇ, ಪುಟ–4
15. ಅದೇ, ಪುಟ–5
16. ಅದೇ, ಪುಟ–5
17. ಅದೇ, ಪುಟ–8
18. ಅದೇ, ಪುಟ–12
19. ಅದೇ, ಪುಟ–13
20. ಅದೇ, ಪುಟ–21
21. ಅದೇ, ಪುಟ–35
22. ಅದೇ, ಪುಟ–50

23. ಅದೇ, ಪುಟ–165, 166, 167

24. ಅದೇ, ಪುಟ–118

25. ಅದೇ, ಪುಟ–119

26. ಅದೇ, ಪುಟ–44–45

27. ಗೀತಾ ನಾಗಭೂಷಣ : ಬದುಕು, ಪುಟ–374

28. ಅದೇ, ಪುಟ–374

29. ಅದೇ, ಪುಟ–375

30. ಅದೇ, ಪುಟ–432

31. ಅದೇ, ಪುಟ–429

32. ಅದೇ, ಪುಟ–476

33. ಅದೇ, ಪುಟ–438

34. ಅದೇ, ಪುಟ–46

35. ಅದೇ, ಪುಟ–208

36. ಅದೇ, ಪುಟ–204

37. ಪ್ರಭಾಮಣಿ : ಮಹಿಳೆ ಮತ್ತು ಧರ್ಮ, ಪುಟ–41

**2. ಲಿಂಗಾಧಾರಿತ ಪ್ರಶ್ನೆಗಳು**

'ಲಿಂಗ' ಎಂಬುದಕ್ಕೆ ಸೆಕ್ಸ್ ಮತ್ತು ಜಂಡರ್ ಎಂದು ಬಳಸುವ ವಾಡಿಕೆಯಿದ್ದು, ಸೆಕ್ಸ್ ಎನ್ನುವುದು ಶರೀರಕ್ಕೆ ಸಂಬಂಧಿಸಿದ್ದಾದ್ದರಿಂದ ನೈಸರ್ಗಿಕವಾದದ್ದು. 'ಜಂಡರ್' ಎಂಬುದು ಸಾಮಾಜಿಕ ಸಾಂಸ್ಕೃತಿಕವಾಗಿ ಏರ್ಪಡುತ್ತದೆ.[1] ಹುಟ್ಟುವಿಕೆಯ ಲಿಂಗವು ಗಂಡು ಅಥವಾ ಹೆಣ್ಣು ಆದರೂ ರೂಪಿಸುವಿಕೆ ಸಮಾಜದ್ದಾಗಿರುತ್ತದೆ. ಅಂದರೆ ಸಿಮೋನ್ ದಿ ಬೋವಾ ಹೇಳುವ ಹಾಗೆ ಹೆಣ್ಣು ಹುಟ್ಟುವುದಿಲ್ಲ ರೂಪಿತವಾಗುತ್ತಾಳೆ. ಹೆಣ್ಣಿಗಿರುವಂತಹ ಸ್ತ್ರೀತ್ವ, ತಾಯ್ತನ ಎಂಬುದನ್ನು ವಿಶಿಷ್ಟವಾದದ್ದು. ವೈವಿಧ್ಯತೆಯಿಂದ ಕೂಡಿರುವುದಾಗಿದೆ ಎಂದು ಗುರುತಿಸಲಾರದ ಸಮಾಜ ಮಾನವ ಕುಲವನ್ನು ಸ್ತ್ರೀ–ಪುರುಷ ಎಂದು ಪ್ರತ್ಯೇಕ ಜಾತಿಗಳಾಗಿ ವಿಭಜಿಸಿರುವುದು ಸಮಾಜ ಕಟ್ಟಿದ ಮೊದಲ ಮಿಥ್ ಆಗಿದೆ. ಹಾಗಾಗಿ ಸಮಾಜದಲ್ಲಿ ಮೊದಲಿಗೆ ಉಂಟಾದ ತಾರತಮ್ಯವೆಂದರೆ ಸ್ತ್ರೀ–ಪುರುಷರದೇ ಆಗಿದೆ.

ಸಮಾಜ ಎಂಬುದು ಪುರುಷನದ್ದೇ ಆಗಿದ್ದು ಮಾನವ ಜನಾಂಗದಲ್ಲಿ ಗಂಡಸು ಹುಟ್ಟಿ ನಿಂದಲೇ ಹೆಣ್ಣಿಗಿಂತ ಅನುಕೂಲಕರವಾಗಿ ದೈಹಿಕ ರಚನೆಯನ್ನು ಪಡೆದದ್ದು ಕಾರಣವಾಗಿ ತನ್ನನ್ನು ಉನ್ನತನೆಂದು ಸ್ಥಾಪಿಸಿಕೊಳ್ಳಲು ಸಾಧ್ಯವಾಯಿತು. ತಾನೇ ಪ್ರಧಾನ ಹೆಣ್ಣು ಅಧೀನವೆಂದು ಮೇಲು–ಕೀಳುಗಳ ನೆಲೆಯಲ್ಲಿ ಗುರ್ತಿಸಲಾಗಿದ್ದು, ಒಂದು ಲಿಂಗವು ಇನ್ನೊಂದು ಲಿಂಗದ ಮೇಲೆ ಚಲಾಯಿಸುತ್ತಿರುವ ಅಧಿಕಾರದ ಪ್ರಶ್ನೆಯಾಗಿದೆ. ಈ ಲಿಂಗತಾರತಮ್ಯದ ನೆಲೆಯಲ್ಲಿ ಸ್ತ್ರೀಯರನ್ನು ಕೀಳಾಗಿ ಕಂಡ ವೈದಿಕ ಪರಂಪರೆಗೆ 'ಮೊಲೆ ಮೂಡಿಬಂದರೆ ಹೆಣ್ಣೆಂಬರು', 'ಪೆಣ್ಣು ಪೆಣ್ಣೆಂದೇಕೆ ಬೀಳುಗಳೆವರು ಕಣ್ಣು ಕಾಣದ ಗಾವಿಲರು' ಎಂಬ ಮಾತುಗಳೆಲ್ಲಾ ಸೂಕ್ತಿಗಳಾಗಿಯೇ ಉಳಿದು ಲಿಂಗ ಪ್ರಭೇದವು ಒಂದು ಪ್ರಬಲವಾದ ರಾಜಕೀಯ ವ್ಯವಸ್ಥೆಯಾಗಿರುವುದು ಕಂಡುಬರುತ್ತದೆ.

ಲಿಂಗ ಪ್ರಭೇದವು ಮನೋವ್ಯಾಪಾರಗಳ ಮೂಲಕ ಪೀಳಿಗೆಯಿಂದ ಪೀಳಿಗೆಗೆ ರವಾನೆಯಾಗುತ್ತಾ, ಸಾಂಸ್ಕೃತಿಕವಾಗಿ ಬೆಳೆಯುತ್ತಾ ಸಾಗುತ್ತದೆ. ಈ ಬೆಳವಣಿಗೆಯ ಪ್ರಕ್ರಿಯೆಯಲ್ಲಿ ಅದು ಚರಿತ್ರೆಯ ಒಂದು ಅಂಗವಾಗುತ್ತದೆ. ಹೀಗೆ ಲಿಂಗ ಪ್ರಭೇದ ಶಾಶ್ವತವಾದ ಸ್ಥಿತಿಯೂ ಆಗಿದ್ದು ಮುಂದುವರೆದುಕೊಂಡು ಹೋಗುತ್ತಲೆ ಇರುತ್ತದೆ. ಲಿಂಗಪ್ರಭೇದವು ಏಕ ಮುಖವಾಗಿರದೇ ಬಹುಮುಖವಾಗಿದ್ದು ಸಮಾಜದಲ್ಲಿ ಜಾತಿ, ವರ್ಗ, ಲಿಂಗ, ಕುಟುಂಬ, ವಿವಾಹ, ಧರ್ಮಗಳಲ್ಲಿ ಸಂಘರ್ಷವನ್ನು ನಡೆಸುತ್ತಾ ತನ್ನ ಚಹರೆಯನ್ನು ಉಳಿಸಿಕೊಂಡು ಬಂದಿದೆ. ಪ್ರಧಾನಧಾರೆಯಾದ ಲಿಂಗರಾಜ ಕಾರಣದ ಪ್ರಹಾರ ಒಮ್ಮೆ ಮಾತುಗಾರಿಕೆಯದಾದರೆ

ಇನ್ನೊಮ್ಮೆ ಮೌನವಾದುದು ಆಗಿರಬಹುದು. ಒಂದೇ ಕಾಲಕ್ಕೆ ಒಂದೇ ಪ್ರದೇಶಕ್ಕೆ ಮಾತ್ರ ಸೀಮಿತವಲ್ಲ ಅದು ಎಂದೆಂದಿಗೂ ಇರುವಂತಹದ್ದು, ಇಡೀ ಸಾಮಾಜಿಕ ವ್ಯವಸ್ಥೆಯನ್ನೇ ಕೆಲವೊಂದು ಸಲ ಟೊಳ್ಳಾಗಿಸುವಂತಹದ್ದಾಗಿರುತ್ತದೆ. ಇಂತಹ ಲಿಂಗಾಧಾರಿತ ನೆಲೆಗಳಿರುವುದನ್ನು ಗೀತಾರವರ ಕಾದಂಬರಿಗಳಲ್ಲಿ ನೋಡಬಹುದಾಗಿದೆ.

**ಹಸಿಮಾಂಸ ಮತ್ತು ಹದ್ದುಗಳು :–**

ಗೀತಾರವರ ಈ ಕಾದಂಬರಿಯಲ್ಲಿ ನಮಗೆ ಮುಖ್ಯವಾಗಿ ಕಾಣುವಂತಹದ್ದು ವರ್ಗ ಮತ್ತು ಲಿಂಗವೇ ಅಧಿಕಾರ ಕೇಂದ್ರವಾಗಿರುವುದು. ವರ್ಗ ಎಂಬುದು ಕೆಳಜಾತಿಯ ಪುರುಷನಿಗೆ ಸೀಮಿತವಾದರೆ, ಈ ಎರಡರಲ್ಲೂ ಶೋಷಿತಳಾಗಿ ಪ್ರತಿರೋಧ ಒಡ್ಡುವಳು ಹೆಣ್ಣು ವರ್ಗ ಮತ್ತು ಲಿಂಗವನ್ನು ಆಧಾರವಾಗಿಟ್ಟುಕೊಂಡು ಆಧಿಕಾರ ನಡೆಸುವಂತಹದ್ದು ಪ್ರಧಾನವರ್ಗವಾದ ಕುಲಕರ್ಣಿ ಮತ್ತು ಗೌಡ, ಕೆಳವರ್ಗದವನಾದಂತಹ ಫಕೀರಪ್ಪನು ಹಿಂದಿನಿಂದಲೂ ನಡೆದುಕೊಂಡು ಬಂದಿರುವ ರೀತಿ ರಿವಾಜುಗಳನ್ನು ಮೀರುವ ಪ್ರಯತ್ನವನ್ನು ಕಾಣಬಹುದು. "ಏ...... ಹಾದಕರ ಹುಟ್ಟಿದವ್ನೇ...... ನಿನ್ ಹೆಣ್ತಿಗೆ ಕರ್ಕೊಂಡುಬಾರ್ಲೆ......"[2] ಎಂದು ಹೇಳಿದ ಫಕೀರಪ್ಪ ಊರು ಬಿಟ್ಟು ಕುಲಕರ್ಣಿ ಸತ್ತ ನಂತರವೇ ಅವನು ಮತ್ತೆ ಹಳ್ಳಿಗೆ ಬಂದು ಗೌಡನಿಗೆ ಹೆದರದೆ ಗಟ್ಟಿಯಾಗಿ ಉಳಿಯುತ್ತಾನೆ. ಈ ಫಕೀರಪ್ಪನಿಗೆ ಕುಲಕರ್ಣಿಯ ಮಾತಿನಿಂದ ಕೋಪ ಬಂದರೂ ಅವನು ಸಮಾಧಾನ ಮಾಡಿಕೊಳ್ಳುವುದಾದರೂ ಯಾವಾಗ ಕುಲಕರ್ಣಿಯ ಹೆಂಡತಿ ಹೀರಾಬಾಯಿ ತನ್ನ ಜಾತಿಯವನೇ ಆದ ಕಾಳ್ಯಾನೊಂದಿಗಿದ್ದಾಗ ಇದು ಕಾಳ್ಯಾ ವರ್ಗವನ್ನು ಮೀರುವ ಪ್ರಕ್ರಿಯೆಯು ಆಗಿದೆ. ಅಷ್ಟೇ ಅಲ್ಲದೆ ಕುಲಕರ್ಣಿಯ ಕೋಣ ಸತ್ತಿರುವ ಸುದ್ದಿ ತಿಳಿದಾಗ ಹೇಳುವ ಮಾತುಗಳಾದರೂ ಏನು "ತಂಗಬರ್ರಿ..ತಂಗಬರ್ರಿ...ತಿನ್ರಿ...ತಿನ್ರೋ ಅವರ ಸತ್ತದನಗೋಳ ಖಂಡಾ ತಿಲ್ಲೀಕ್ಕೇ ಹುಟ್ಟದವ್ರು ನಾವು...."[3] ಎಂಬಂತಹ ನೋವಿನಿಂದ ಕೂಡಿದ ಆಕ್ರೋಶವೇ ವರ್ಗದ ವಿರುದ್ಧದ ಪ್ರತಿರೋಧನೆ ಆಗಿದೆ.

ಈ ಅಧಿಕಾರ ಕೇಂದ್ರದಲ್ಲಿ ಊಳಿಗಮಾನ್ಯತೆಯ ಹೆಸರಲ್ಲಿ ಸಿಲುಕಿ ನರಳುತ್ತಿರುವ ಮತ್ತೊಂದು ಪಾತ್ರವೆಂದರೆ ಕಾಶೀನಾಥನದೆಂದು ಮೇಲ್ನೋಟಕ್ಕೆ ಅನ್ನಿಸಿದರೂ ಸಹ ಆತನು ಅಧಿಕಾರ ಕೇಂದ್ರವಾದ ಪ್ರಧಾನ ಲಿಂಗವಾಗಿದ್ದಾನೆ. ಕುಂಬಳಕಾಯಿಯನ್ನು ಕೊಟ್ಟಿದ್ದರಿಂದ ಲಚ್ಚಿ ಕಳ್ಳಿ ಎನ್ನುವ ಆರೋಪದಿಂದ ಜೈಲಿಗೆ ಹೋಗಿ ಅತ್ಯಾಚಾರಕ್ಕೆ ಒಳಗಾದದ್ದನ್ನು ತಿಳಿದಂತಹ ಕಾಶೀನಾಥನೂ ಪುರುಷ ಪ್ರಧಾನತೆಯ ಅಧೀನವರ್ಗದ ಪ್ರತಿನಿಧಿ. ಅಷ್ಟೇ ಅಲ್ಲದೇ 'ಗಂಡು' ಎಂಬುದು ಗಂಡಸಾಗಿ ತನ್ನ ಅಧಿಕಾರ ಚಲಾವಣೆ ನಡೆಸುತ್ತಿದ್ದಾನೆ.

ಅಧೀನವರ್ಗವಾಗಿ ಅಧಿಕಾರ ಚಲಾಯಿಸುವ ಕಾಶೀನಾಥನು ಪ್ರಧಾನವರ್ಗದ ಕುಲಕರ್ಣಿಗೆ ಶೋಷಿತನಾಗಿದ್ದಾನೆ. ನಾನು ನಿಮ್ಮ ಬಳಿ ಕೆಲಸಕ್ಕೆ ಬರುವುದಿಲ್ಲ ಎಂದು ಹೇಳಿದ ಕಾಶೀನಾಥನ ಮಾತಿಗೆ ಕುಲಕರ್ಣಿಯ ಉತ್ತರ "ಏನ್ಲೆ ಹಾದರಕ್ಹುಟ್ಟೇದ್ ನನ್ಮಗನೇ .... ನಿನ್ ಸಾಲಾ ಹಿನಾ ಮುಟ್ಟಿಲ್ಲ, ಚಾಕರಿ ಬಿಟ್ಟು ಹೋಗ್ತ್ಯಾ?"[4] ಎಂಬುದೇ ಆಗಿದೆ. ಪುರುಷನಷ್ಟೇ ಅಧಿಕಾರದ ಕೇಂದ್ರವಾಗಿಲ್ಲ, ಸ್ತ್ರೀಯೂ ಅಧಿಕಾರದವಳಾಗಿದ್ದಳೆ ಎಂಬುದನ್ನು ಇಲ್ಲಿ ಕಾಣಬಹುದು. ಸ್ತ್ರೀನಿಕೇತನದ ಸೂಪರಿಂಟೆಂಡೆಂಟ್ ಆದ ಭಾರತೀಯ ಹೆಣ್ಣು ಸ್ವದೇಶದವಳಾದರೂ ಆಕೆ ಮಾತನಾಡುತ್ತಿರುವ ಭಾಷೆಯಾದರೂ ಯಾವುದು ಇಂಗ್ಲೀಷ್ ಆಗಿದೆ. ಸ್ತ್ರೀ ರಕ್ಷಣೆಗೆಂದೇ ಇರುವಂತಹ ಸ್ತ್ರೀನಿಕೇತನದಲ್ಲಿ ಸ್ತ್ರೀಯರನ್ನು ಮಾರುವಂತಹ ದಂಧೆಯಿಂದಲೇ ತಾನು ಅಧಿಕಾರ ನಡೆಸುವಂತವಳಾಗಿದ್ದಾಳೆ.

ಇಂತಹ ಅಧಿಕಾರ ವರ್ಗದವರ ಕೈಗೊಂಬೆಯಾಗಿ ಅಧೀನ ವರ್ಗ ಮತ್ತು ಲಿಂಗದಲ್ಲಿ ಹೆಣ್ಣಾಗಿರುವ ಲಚ್ಚಿ ಹೆಣ್ಣಾಗಿಯೇ ಪ್ರತಿರೋಧ ವನ್ನು ಒಡ್ಡುತ್ತಾ ಆ ಪುರುಷ ಪ್ರಧಾನತೆಯ ಸಮಾಜದಲ್ಲಿಯೇ ನರಳುವಂತಾಗಿದ್ದಾಳೆ. ಈ ನರಳುವಿಕೆಯೂ ಸಹ ಹೆಣ್ಣಾಗಿ ಕಾಶೀನಾಥನಿಂದ ಪ್ರಧಾನವರ್ಗವಾದಂತಹ ಕುಲಕರ್ಣಿಯಿಂದ ನೋವಿನ ಜ್ವಾಲೆಯಲ್ಲಿ ಉರಿಯುತ್ತಿರುವ ಈ ಲಚ್ಚಿ ವ್ಯವಸ್ಥೆಯ ಅಡಿಯಲ್ಲಿ ಬೇಕಾದಂತೆ ಕುಣಿಸುವ ಪುರುಷ ಪ್ರಧಾನ ವರ್ಗದ ಕೈಗೊಂಬೆಯಾಗಿದ್ದಾಳೆ. ಇಲ್ಲಿರುವಂತಹ ಸಮಾಜವೇ ಗಂಡು ಅಲ್ಲ ಗಂಡಸಾಗಿ ಬಿಟ್ಟ ಸಮಾಜವಾಗಿದೆ.

ತನ್ನ ತಪ್ಪೇ ಇಲ್ಲದೆ ಜೈಲಿಗೆ ಹೋಗುವುದು ಮತ್ತು ಆಕೆಯ ಪರಿಸ್ಥಿತಿ ಹೆಣ್ಣಾಗಿ ಹುಟ್ಟಿರುವುದರಿಂದಲೇ ಲಿಂಗಾಧಾರಿತ ನೆಲೆ ಹೆಣ್ಣನ್ನು ಶೋಷಣೆಯಲ್ಲಿಯೂ ಶೋಷಣೆಗೊಳಪಡಿಸುತ್ತಿದೆ ಇನ್ನೂ ಆಳವಾದ ಶೋಷಣೆಗೆ ಆಕೆಯನ್ನು ಗುರಿ ಮಾಡುತ್ತಿದೆ. ಏಕೆಂದರೆ ಅಧಿಕಾರದ ಮೂಲಭೂತವಾದಿತನದಿಂದಾಗಿಯೇ ಎಂಬುದನ್ನ ಈ ಕಾದಂಬರಿ ಚಿತ್ರಿಸುತ್ತದೆ. ಹೆಣ್ಣು ಮಕ್ಕಳನ್ನು ಹದ್ದುಗಳಿಗೆ ಸಿಗದ ಕೋಳಿಯಮರಿಯಂತೆ ಕಾಯಬೇಕು ಹಾಗು ಲಚ್ಚಿಯ ತಾಯಿ ಸತ್ತಾಗ ಆಡುವಂತಹ ಮಾತುಗಳು ತಾಯ್ತನ ಮತ್ತು ಹೆಣ್ಣು ಎಂಬ ಕಾರಣದಿಂದ ಆಕೆಯನ್ನು ಸಮಾಜ ಯಾವ ರೀತಿ ನೋಡುತ್ತದೆ, ಶೋಷಣೆಗೆ ಒಳಗು ಮಾಡುತ್ತದೆ ಎಂಬುದು ಒಂದು ಕಡೆಯದಾದರೆ, ಪ್ರಧಾನ ಸಂಸ್ಕೃತಿ ಅಥವಾ ವರ್ಗ ಅಧೀನಳಾದ ಹೆಣ್ಣಿನ ಮೇಲೆ ಅಧಿಕಾರ ಚಲಾಯಿಸುತ್ತದೆ ಎಂಬುದನ್ನು ಕಾಣಬಹುದು.

ಹೆಣ್ಣಾಗಿದ್ದರೂ ತಾನು ಕಳವು ಮಾಡಿಲ್ಲವೆಂಬ ದಿಟ್ಟ ನಿಲುವಿನ ವ್ಯಕ್ತಿತ್ವ ಹೀಗಿದೆ ಖಾಕಿಯುಡುಗೆಯವರು ತಮ್ಮ ಶಬ್ದಕೋಶದಲ್ಲಿಯ ಹೆಣ್ಣುಗಳಿಗೆ ಬೈಯುವ ಎಲ್ಲ ಪದಗಳನ್ನು ಇನ್ಸ್‌ಪೆಕ್ಟರ್ ಇವಳ ಮೇಲೆ ಪ್ರಯೋಗಿಸಿದ ಹೆದರಿಸಿದ ಬೆದರಿದ, ಊಹೂಂ..... ಲಚ್ಚಿ ತಾನು ಕಳ್ಳಿ ಅಂತ ಒಪ್ಪಿಕೊಳ್ಳಲಿಲ್ಲ. ಈಕೆಯದು ಈ ಉತ್ತರವಾದರೆ ಪೋಲೀಸರದು ? ವ್ಯವಸ್ಥೆಯದು ?

ಈ ಕಾದಂಬರಿಯಲ್ಲಿ ಹೆಣ್ಣು ಎಂದರೆ ದೇಹ, ದೇಹವೆಂದರೆ ಹೆಣ್ಣು ಎಂಬಂತಹ ಕ್ರೌರ್ಯತೆಯ ಚಿತ್ರಣಪ್ರಧಾನಆಗಿದ್ದು ಪಟ್ಟಭದ್ರಾ ಹಿತಾಸಕ್ತಿಗಳು ತಮ್ಮ ಮೂಲಭೂತವಾದಿತನವನ್ನು ಉಳಿಸಿಕೊಳ್ಳುವುದೇ ಈ ಕಾದಂಬರಿಯಲ್ಲಿ ಕಂಡು ಬರುತ್ತದೆ. ಆದ್ದರಿಂದಾಗಿ ಹೆಣ್ಣಿನ ಪ್ರತಿಭಟನೆ ಮಾತು, ಮೌನ, ನಗು, ಅಳುವೇ ಆಗಿದ್ದು ಇರುವಂತಹ ವ್ಯವಸ್ಥೆಯನ್ನು ಸ್ವೀಕರಿಸುತ್ತಲೇ ಅಂತ್ಯವಾಗುತ್ತದೆ. ಅನಡುವೆ ಪ್ರತಿಭಟನೆ ಇದೆ. ಇದರಿದಾಗಿ ಹೆಣ್ಣಿನ ಸಮಸ್ಯೆ ಸೂಕ್ಷ್ಮ ಮತ್ತು ಆಳವಾದುದ್ದಾಗಿದೆ ಎಂದು ಕಾದಂಬರಿ ಸೂಚಿಸುತ್ತದೆ.

**ಆಸರೆಗಳು**

ಗೀತಾ ನಾಗಭೂಷಣ ಅವರ ಕಾದಂಬರಿ (ಪಠ್ಯ)ಗಳಲ್ಲಿ ಮೇಲ್ವರ್ಗ ಮತ್ತು ಮಧ್ಯಮವರ್ಗಗಳಲ್ಲಿ ಕಾಣಿಸಿಕೊಳ್ಳುವ ಲಿಂಗತಾರತಮ್ಯತೆಯ ತೀವ್ರತೆ, ಕೆಳವರ್ಗಗಳಲ್ಲಿ ಪ್ರಕಟವಾಗುವುದಿಲ್ಲ ಎಂಬುದು ಹೊರನೋಟಕ್ಕೆ ವ್ಯಕ್ತವಾಗುವ ಅಂಶ. ವಾಸ್ತವದಲ್ಲಿ ಇದು ಭಾಗಶಃ ಸತ್ಯವಾಗಿ ಮಾತ್ರ ಕಾಣಿಸುತ್ತದೆ. ಇದಕ್ಕೆ ಮುಖ್ಯ ಕಾರಣ ಗುಲಾಮಗಿರಿ ಜೀತ ವ್ಯವಸ್ಥೆಯ ಒಳಗೆ ಕೂಡ ಪುರುಷ ಪ್ರಧಾನ ಆಶಯಗಳು ಪ್ರಬಲವಾಗಿ ಕೆಲಸ ಮಾಡುತ್ತಿರುವುದು. ಇದು ಹೆಣ್ಣು ಮಕ್ಕಳನ್ನು ಹಡೆಯುವ, ಅವರನ್ನು ಬೆಳೆಸುವ ಕ್ರಮದಲ್ಲಿ ಆ ಸಮಾಜದ ಒಳಗೂ ಕಂಡುಬರುತ್ತದೆ. ಇದನ್ನು ಗೀತಾನಾಗಭೂಷಣ ಅವರ ಕಾದಂಬರಿ ಕಥನಗಳು ಶಕ್ತವಾಗಿ ಬಿಂಬಿಸುತ್ತವೆ[7]. ಈ ಕಾದಂಬರಿಯಲ್ಲಿ ವರ್ಗ ಮತ್ತು ಲಿಂಗದ ಜೊತೆಗೆ ಕುಟುಂಬ, ವಿವಾಹ, ದಾಂಪತ್ಯ, ವರ್ಗ ಎನ್ನುವ ಅಧಿಕಾರ ಕೇಂದ್ರಗಳು ಸಹ ಬರುತ್ತವೆ. ಈ ಎಲ್ಲಾ ಅಧಿಕಾರ ಕೇಂದ್ರಗಳಿಂದ ಶೋಷಣೆಗೊಳಗಾಗುತ್ತಾ ಮುಖಾಮುಖಿಯಾಗುವುದು ಹೆಣ್ಣೇ ಆಗಿದೆ.

ಸಮಾಜದಲ್ಲಿ ಅಧೀನ ಲಿಂಗ ಮತ್ತು ವರ್ಗದವರಾದ ತಾಯವ್ವ ಮತ್ತು ಆಕೆಯ ಮಗಳು ತನ್ನ ವರ್ಗದಲ್ಲಿನ ಕುಟುಂಬ, ವಿವಾಹ, ದಾಂಪತ್ಯದೊಂದಿಗೆ. ಮುಖಾಮುಖಿಯಾಗುವುದು ಕಂಡು ಬರುತ್ತದೆ. ತಾಯವ್ವನನ್ನು ಮಾನಿಂಗಪ್ಪನ ಸೋದರತ್ತೆಯ ಮಗ ಈಸೂರನಿಗೆ ಕೊಟ್ಟು

ಮದುವೆ ಮಾಡಿರುತ್ತಾರೆ. ಮಕ್ಕಳಾಗಲಿಲ್ಲ ಎಂಬ ಒಂದೇ ಕಾರಣಕ್ಕಾಗಿ ಆಕೆಯನ್ನು ಹೊಡೆಯುವುದರ ಮೂಲಕ ಸೋಡ ಚೀಟಿಯನ್ನು ಕೊಟ್ಟು ತಾಯಿಯ ಮನೆಗೆ ಕಳಿಸುತ್ತಾನೆ. ಹೆಣ್ಣಿಗೆ ವಿಶಿಷ್ಟವಾಗಿರುವ ತಾಯ್ತನ ಇಲ್ಲದ್ದರಿಂದಲೇ ಆಕೆಗೆ ಈ ಶಿಕ್ಷೆಯಾದರೆ "ನೀ ಯಾಕ್ ಈ ಪಾಟಿ ಅಳ್ತಿ ಬಿಡೇ ಗಂಗಾ...... ಬ್ಯಾರೆ ವರಾ ನೋಡೀ ಕೊಟ್ಟಾ ಉಡಕಿ ಮಾಡದ್ರಾಯ್ತು ಬಿಡು ಸಮ್ನಿರು....."[8]? ಇಲ್ಲಿ ಎರಡನೆಯ ಮದುವೆಗೆ ಅವಕಾಶವಿದ್ದರೂ ಸಹ ಗಂಡಿನದೇ ಮೇಲುಗೈಯಾಗಿರುವುದು ಕಂಡು ಬರುತ್ತದೆ. ಮೊದಲ ಮದುವೆಗೂ ಹೆಣ್ಣಿನ ಒಪ್ಪಿಗೆ ಕೇಳದೆ ಎರಡನೇಯ ಮದುವೆಯೂ ಆಗಿ ಬಿಡುತ್ತದೆ. "ನಿಮ್ಮ ಮಗಳು ನಮಗ ಪಸಂದ ಬಂದಾಳ್ರಿ ನಿಮಗ ನಾನು ಪಸಂದಾಗಿದ್ರ ನಾಡದ ಸುಕರಾರ ಬಂದು ನಮ್ಮನಿ ಹೊಲ ನೋಡ್ರಿ ಮುಂದ ಮಾತುಕತಿ ಆಡಿ ನಿಶ್ಚ್ಯಾ ಮಾಡೋಣಂತ"[9] ಹೆಣ್ಣಿಗೆ ಸ್ವಂತ ಅಸ್ತಿತ್ವವೆಂಬುದಿಲ್ಲ, ಅದನ್ನು ಈ ರೀತಿಯಾಗಿಯೇ ಗುರುತಿಸಿಕೊಳ್ಳಬೇಕಾಗಿದೆ. ದಾಂಪತ್ಯದ ಸ್ವರೂಪವನ್ನು ವಿಶ್ಲೇಷಣೆ ಮಾಡುವುದಾದರೆ ಸ್ತ್ರೀಯಾವ ಪರಿಸರ, ಪರಿಸ್ಥಿತಿ, ಸಂದರ್ಭದ ಚೌಕಟ್ಟಿನಲ್ಲಿದ್ದರೂ ಪುರುಷನಿಂದ ವಂಚನೆಗೆ ಒಳಗಾಗುವ ವಿನ್ಯಾಸ ಮೃಗೀಯವಾದದ್ದಾಗಿ ಕಂಡುಬರುತ್ತದೆ. ತಾಯವ್ವ ಇಬ್ಬರು ಗಂಡಂದಿರೊಂದಿಗೆ ಬಾಳ್ವೆ ನಡೆಸಿದರೂ ಇಬ್ಬರ ದೌರ್ಬಲ್ಯವೂ ಹೆಂಡ ಮತ್ತು ಹೆಣ್ಣು, ಕುಡಿತ, ಜೋಗತಿಯರ ಸಹವಾಸದಿಂದ ಈಸೂರ ಮತ್ತು ಗೋಳಪ್ಪ ಇಬ್ಬರೂ ತಾಯವ್ವನನ್ನು ಬಾಳಸಲಾರದೇ ಹೋಗುತ್ತಾರೆ. ಅದು ಈ ರೀತಿ ವ್ಯಕ್ತವಾಗುತ್ತದೆ.

"ಕತ್ತಲು ಕೋಣೆಯಲ್ಲಿ ವಿಧವೆಯರ ಮುಂದೆ ತಾಯವ್ವನ ಕೊರಳಲ್ಲಿ ಕರಿಮಣಿ ಕಟ್ಟಿ ಹಣೆಗೆ ಕುಂಕುಮ ಇಟ್ಟು ಉಡಕಿ ಮಾಡಿಕೊಂಡು ಅವಳ ಗಂಡನಾಗಿ ಬಿಟ್ಟ ಅಂದು ರಾತ್ರಿಯೆಲ್ಲ ಗೋಳಪ್ಪನ ಮಗ್ಗುಲಲ್ಲಿ ಮಲಗಿದ್ದಾಗ ತಾಯವ್ವನ ಮನಸ್ಸು ಧಡಕ್ಕೆ ತನ್ನ ಮದಲಿಗಂಡನನ್ನು ನೆನೆಸಿ ಕಣ್ಣೀರು ಹರಿಸಿತು. ಖರೇವಂದ್ರ ಅವಳಿಗೆ ಈಸೂರನ ಮೇಲೆ ಬಹಳ ಪ್ರೀತಿಯಿತ್ತು, ಪ್ರೇಮವಿತ್ತು. ಆದರೆ ಈಸೂರ ಕಿವುಡಾಗಿ, ಕುರುಡಾಗಿ, ಕಲ್ಲಾಗಿನಿಂತು ಕೊರಳಲ್ಲಿಯ ತಾಳಿಯನ್ನೇ ಹರಿದುಕೊಂಡು ಒದ್ದು ಹೊರತಳ್ಳಿದ್ದ"[10] ಮತ್ತು ಗೋಳಪ್ಪನ ಚರಿತ್ರೆಯನ್ನು ತಿಳಿದ ತಾಯವ್ವನ ಪರಿಸ್ಥಿತಿ ಬಾವಿಯಿಂದ ಜಾರಿ ಮಡವಿಗೆ ಬಿದ್ದಾಂತಾಗಿತ್ತು. ಗಂಡಿನ ವ್ಯವಸ್ಥೆಗೊಳಪಟ್ಟ ಸಮಾಜದ ರೀತಿ, ರಿವಾಜುಗಳನ್ನು ಹೆಣ್ಣು ಪ್ರಶ್ನಿಸುವುದಂತೂ ಸಾಧ್ಯವೇ ಇರಲಿಲ್ಲ. ಗಂಡನ ಆಸರೆಯಲ್ಲಿಯೇ ಹರೆಯ ಸವೆಯಿಸಬೇಕಾಗಿತ್ತು. ಒಬ್ಬನ ಆಶ್ರಯ ತಪ್ಪಿದರೆ ಮತ್ತೊಬ್ಬರ ನೆರವಿಗೆ ಸರಿಯುವುದು ಅನಿವಾರ್ಯವಾಗಿತ್ತು.

ತಾಯವ್ವನ ಮಗಳಾದ ತಾಳಿಯ ದಾಂಪತ್ಯ ಮತ್ತು ವಿವಾಹಗಳು ಈ ರೀತಿ ಇವೆ. ಹಳ್ಳಿಯಲ್ಲಿ ಗೋಳಪ್ಪನ ಮಗಳಾಗಿ ತನ್ನ ಆಯುಷ್ಯದ ಕಾಲು ಭಾಗವನ್ನು ಕಳೆದಿದ್ದ ತಾಳಿ ಕಾಡ್ಯಾನನ್ನು ವಿವಾಹವಾಗಿ ಬೊಂಬಾಯಿಯ ಬಾಂದ್ರಾ ಝೋಪಡ ಪಟ್ಟಿಯ ಒಂದು ಗುಡಿಸಲಿಲ್ಲ ತಾಳಿಯ ಬದುಕು ಪ್ರಾರಂಭವಾಯಿತು. ಇಲ್ಲಿನ ದಾಂಪತ್ಯವೂ ಸುಖಕರವಾಗಿಲ್ಲ, ನೈಜವಾಗಿಲ್ಲ ಅಲ್ಲಿನ ಗಂಡಸರು ಕಳುವು ಕಿಸೆ ಕತ್ತರಿಸುವಿಕೆ, ಚಾಕು ಚೂರಿಗಳ ಆಟ, ಗೂಂಡಾಗಿರಿ, ತಲೆಹಿಡುಕುತನ, ಹೆಂಗಸರ ಮಾರಾಟ, ಅಕ್ರಮವಾಗಿ ಆಫೀಮು, ಗಾಂಜಾ ಸಾಕಾಣಿಕೆ, ಕಾಳದಂದೆ ಈ ಮುಂತಾದ ಕೆಲಸಗಳಲ್ಲಿ ತೊಡಗಿದವರು. ಇಂತಹವರ ಜೊತೆ ಬದುಕುವಂತಹ ಹೆಂಗಸರಲ್ಲೂ ಸ್ಪಷ್ಟ ಕಲ್ಪನೆಗಳು ದಾಂಪತ್ಯದ ಕಲ್ಪನೆ ಸಿಗುವುದಿಲ್ಲ. ಇದರಲ್ಲಿ ಹೆಂಗಸರೂ ಸೇರಿ ಹೋಗುವುದು ಕಂಡುಬಂದರೂ ತಾಳಿ ಇದನ್ನು ಅನುಸರಿಸುವುದಿಲ್ಲ ಬದಲಾಗಿ ಆಕೆ ಕೆಲಸ ಮಾಡಿ ಜೀವನ ಸಾಗಿಸುತ್ತಾಳೆ ಮತ್ತೆ ತನ್ನ ಊರಿಗೆ ಹಿಂದಿರುಗುತ್ತಾಳೆ. ತಾಯವ್ವ ಹಾಗೂ ತಾಳಿಯ ಬದುಕಿನಲ್ಲಿ ದಾಂಪತ್ಯದ ಅರ್ಥಪೂರ್ಣತೆ ಕಂಡು ಬರುವುದಿಲ್ಲವಾದರೂ ಹೆಣ್ಣಾಗಿ ಬರುವಂತಹ ಪರಿಸ್ಥಿತಿಯನ್ನೇ ನಿಭಾಯಿಸುವಂತದ್ದಿದೆ.

ಅಲ್ಲದೇ ತಾಳಿ ವರ್ಣ ಸಂಕರವನ್ನು ಎದುರಿಸುವಂತಹ ಪ್ರಸಂಗವೂ ಇದೆ. ತಾಳಿ ತನ್ನ ಮಗನಾದ ಬೆಳ್ಯಾನನ್ನು ಶಾಲೆಗೆ ಸೇರಿಸಲು ಕರೆದುಕೊಂಡು ಹೋಗುತ್ತಾಳೆ. ಆಗ ಹೇಳಿದ ಮೇಷ್ಟ್ರು ಮಾತು ಈ ರೀತಿ ಇದೆ. "ಹೂಂ....... ಅಲ್ಲೇ ತಾಳವ್ವ ಮಗು ಬಾಳ ಛಂದ ಆದಾನ ಬಿಡು. ಬೆಳ್ಳಗ ಎತ್ತರ ಅದಾ ಅಂಥ್ವಂಗ ಇಷ್ಟು ಛಲೋ ರೂಪ ಇರೋ ಮಕ್ಕಳು ನಿಮ್ಮಂದ್ಯಾಗ ಹುಟ್ಟೋದು ಅಪರೂಪ. ಅಲ್ವ ಕರಿ ಎಳ್ಳಿನಲ್ಲಿ ಬಿಳಿ ಎಳ್ಳಿನ ಬೀಜ ಎಲ್ಲೆರೆ ಒಂದೊಂದು ಕೂಡಿರ್ತಾವಲ್ಲ ಹಾಂಗ ......" ಎಂಬ ಮಾತಿಗೆ ತಾಳಿಯ ಪ್ರತಿಭಟನೆ ಈ ರೀತಿ ಇದೆ. "ಏ ಮಾಸ್ತರಾ..... ಬಾಯಿ ಬಿಗಿ ಹಿಡಿದು ಮಾತಾಡು ತಿಳಿತೇನು, ನನಗೇನು ಗಂಡ ಇದ್ದಿದ್ದಿಲ್ಲೇನು ? ಬೆಳ್ಳಗಿದ್ರ ಹಾರ್‍ರ ಅಂತ ಬೆಳ್ಳಗಿರಾದು ಬರೇ ನಿಮ್ ಜಾತಿ ಗುತ್ತ ಏನು? ಮತ್ತೆ ತಗದ್ಯಾ ನಿನ್ ಹಲ್ಕಾಬುದ್ದಿ? ಯಾಕೋ ಮಾಸ್ತರ....... ಸಾಲಿ ಕಲ್ಯಾದುನೂ ನಿಮ್ಮಂದಿಗ ಅಂತ ಬರಕೊಟ್ಟಾದೇನು ? ಸರಕಾರ ನಮ್ಮಂದಿಗೆ ಪುಕ್ಕಟೆ ಸಾಲಿ ಕಲಿಸ್ತಾನದಂಬೋದು ನಿನಗೆ ಗೊತ್ತಿಲ್ಲೋನೊ ...... ಈಗ ನೀಯೆನು ಸೀದಾ ಸಾಫ್ ನನ್ ಮಗನಿಗೆ ಸಾಲಿ ಕಲಸವ್ನೋ ಇಲ್ಲೋ ಹೇಳು. ಇಲ್ಲಂದ್ರ ಈಗ ಸೀದಾ ನಾ ಗೌಡ, ಕುಕ್ಕಣ್ಣೀರ ಬಲ್ಲಿ ಹೋಗಿ ಕೇಳ್ತೀನಿ, ಏಲೋ ..... ಬೆಳ್ಳ್ಯಾ...... ನಡಿ......"[11] ವರ್ಗ, ಕುಟುಂಬ , ದಾಂಪತ್ಯ , ವಿವಾಹಗಳಿಗೆ ಹೆಣ್ಣು ಈ ರೀತಿ ಮುಖಾಮುಖಿಯಾದರೆ,

ಮೇಲ್ವರ್ಗದಲ್ಲಿದ್ದುಕೊಂಡೇ ಹೆಣ್ಣು ಎಂದು ಗುರ್ತಿಸಲ್ಪಡುವ ಮೈನಾಬಾಯಿಯ ವೈಚಾರಿಕತೆ ಈ ರೀತಿ ಇದೆ.

"ದೊಡ್ಡ ಜಾತಿ ಮಂದಿ ಹತ್ತಿರ ಬೇಕಾದಷ್ಟು ಸಂಪತ್ತಿರ್ತದ. ಹೊಟ್ಟಿಗಿ ಬಟ್ಟೇಗಿ ಕಡಿಮೆ ಬಿಳೋದಿಲ್ಲ, ನಮ್ಮಂದ್ಯಾಗ ಓದಿದವರಿರ್ತಾರ ಹೇಳಿ ಕೇಳಿ ಬ್ರಾಂಬ್ರು, ಜಗಳಾ, ಹೊಡಿ, ಬಡಿ ಅಂತ ಮಾಡೊದಕ್ಕ ಗಂಡಸ್ರು ಹೆದರ್ತಾರ... ಆದರ ಬಡೂರ ಹೆಂಗಸರಿಗೆ ಸಾಧ್ಯಾ ಆಗೋದು ದುರ್ಲಭ."[12] ಮೇಲ್ವರ್ಗದವಳಾದ ಮೈನಾ ಬಾಯಿಯ ಮಾತಿನಲ್ಲಿ ಕೆಳವರ್ಗದ ದಾಂಪತ್ಯದ ಸ್ವರೂಪ ಕಂಡು ಬಂದರೂ ತಾನು ಮೇಲ್ವರ್ಗದವಳಾಗಿದ್ದು ಆಕೆಯ ದಾಂಪತ್ಯವೂ ಮೇಲ್ನೋಟಕ್ಕೆ ಪರಿಪೂರ್ಣ ಎನಿಸಿದರೂ ಅಂತರಂಗದಲ್ಲಿ ಶಿಥಿಲತೆ ಇದೆ ಎನ್ನಬಹುದು. ಆದರೂ ಅದರಲ್ಲೇ ಒಪ್ಪಿ ನಡೆಯುವುದು ಸಹ ಪ್ರತಿಭಟನೆಯ ಮಾದರಿಯೇ ಆಗಿದೆ. ಅಲ್ಲದೇ ನಾಗವ್ವಾಯಿ ಹೇಳುವಂತೆ ತಾಳಿ ತಂದೆಯ ಮಗಳಲ್ಲ ತಾಯಿಯ ಮಗಳು ಈ ಮಾತು ಪುರುಷನಿಗಿಂತ ಸ್ತ್ರೀಯ ಶ್ರೇಷ್ಠತೆಯನ್ನು ಹೇಳುತ್ತಾ ಪ್ರತಿರೋಧವೇ ಆಗಿದೆ.

ಮೈನಾಬಾಯಿಯ ಮನೆಯಲ್ಲಿ ಕೆಲಸ ಮಾಡುವಂತಹ ತಾಳಿ "ನಮ್ಮಂಥವ್ರು ಹಿಂತಾ ದೊಡ್ಡ ಆಸಿ ಮಾಡ್ಬಾರ್ದರ್ರೀ ಬಾಯಿ....ನಮ್ಮಂದಿ ಹಿಂತಾ ಭಾರಿ ಸೀರೆ ಉಡೋ ಖಾಬಿಲ್ ಇಲ್ರೀ...."[13] ಇದು ವರ್ಗ ಪ್ರಜ್ಞೆ ಎಂಬುದು ಹುಟ್ಟು-ಬೆಳವಣಿಗೆಯಲ್ಲೇ ಇರುತ್ತದೆಂಬುದಕ್ಕೆ ನಿದರ್ಶನವಾಗಿದೆ. ತಾಳಿಯ ಕುಟುಂಬವೂ ಶಿಥಿಲತೆಯೆನಿಸುತ್ತದೆ. ಏಕೆಂದರೆ ಗಂಡನಾದ ಕಾಡ್ಯಾ ದಾಂಥೆಗಳಿಂದ ಸತ್ತರೂ ಮಗನಾದರೂ ಆಕೆಗೆ ನೆಮ್ಮದಿಯನ್ನು ಕೊಡುತ್ತಾನೆಯೆ. ಹೆಂಡತಿ ಹೇಳಿದ ಮಾತನ್ನು ಕೇಳಿ ತಾಯಿಯನ್ನ ಬಿಟ್ಟು ಫಲಾಯನ ಮಾಡುತ್ತಾನೆ. ಈ ಕಾದಂಬರಿಯಲ್ಲಿ ಬರುವಂತಹ ಗೋಳಪ್ಪ, ಈಸೂರ, ಕಾಡ್ಯಾ ಎಲ್ಲರೂ ಫಲಾಯನವಾದಿಗಳಾಗಿಯೇ ಆಗಿದ್ದಾರೆ. ಬೆಳ್ಳ್ಯಾ ಕುಟುಂಬದಲ್ಲಿ ಗಂಡಸಾಗಿ ಹುಟ್ಟಿದ ಒಂದೇ ಒಂದು ಕಾರಣಕ್ಕಾಗಿ ದಕ್ಕಿಸಿಕೊಳ್ಳುವ ಯಜಮಾನಪಟ್ಟ ಈ ಪಟ್ಟದ ಮೇಲೆ ಕುಳಿತು ಹೆಣ್ಣಿನ ಬದುಕಿನ ಬೆಟ್ಟ ಕಟ್ಟುವಂತಹ ಮಗನೂ ಫಲಾಯನವಾದಿಯಾಗಿದ್ದಾನೆ. ಒಟ್ಟಾರೆಯಾಗಿ ಇಲ್ಲಿನ ಅರ್ಥಪೂರ್ಣವಿರದ ಕುಟುಂಬ, ದಾಂಪತ್ಯಗಳಿಗೆ ಹೆಣ್ಣು ಮುಖಾಮುಖಿಯಾಗುತ್ತಿದ್ದಾಳೆ. ಜೊತೆಗೆ ಲೈಂಗಿಕತೆಯ ಮೂಲಕವೇ ತನ್ನ ಅಸ್ತಿತ್ವವನ್ನು ಕಂಡುಕೊಳ್ಳುತ್ತಿದ್ದಾಳೆಯೇ ? ಎನಿಸಿಬಿಡುತ್ತದೆ.

ಈ ಕಾದಂಬರಿಯನ್ನು ಒಳಹೊಕ್ಕು ನೋಡಿದಾಗ ಮೇಲೆ ಕಾಣಿಸುವುದು ವರ್ಗ, ಜಾತಿಗಳ ತಾರತಮ್ಯಗಳೇ ಆಗಿದ್ದು ಧರ್ಮ, ಲಿಂಗ, ಕುಟುಂಬ, ವಿವಾಹ, ದಾಂಪತ್ಯ ಹಾಗೂ ಭಾಷೆಗಳೂ ಅಧಿಕಾರ ಕೇಂದ್ರಗಳಾಗಿವೆ.

ಲಿಂಗರಾಜ ಮತ್ತು ಕಾಶಮ್ಮರ ವಿಚಾರದಲ್ಲಿ ಗಮನಿಸುವುದಾದರೆ "ಅದ್ಯಾಂಗಾಗ್ತದ್ರೀ ಲಿಂಗರಾಜಾ ಸಾವ್ಕಾರ...... ನೀವು ಸಾವ್ಕಾರ್ರು ನಾನು ಬಡೂರು...... ನೀನು ಮ್ಯಾಲಿನ ಕೇರಿನೇನ್ರಿ ಸಾವ್ಕಾರ?[14] ಎಂದು ಹೇಳುವ ಮಾತಿನಲ್ಲಿ ಜಾತಿವರ್ಗಗಳ ಮಾತಿದ್ದರೂ ಅದನ್ನು ಮೀರಿ, ಮದುವೆಯಾಗಿ ಮೂರು ವರ್ಷಗಳ ಕಾಲ ತನ್ನ ಗಂಡನಾದ ಮಾರ್ತಾಂಡನ ಜೊತೆಗಿದ್ದು ನಂತರ ಲಿಂಗರಾಜನ ತೋಟದ ಮನೆಗೆ ಸೇರಿ ವರ್ಗ, ಜಾತಿಗಳನ್ನು ಮೀರುತ್ತಾಳಾದರೂ ಕೊನೆಗೆ ರಂಡೆಯಾಗಿ ಉಳಿಯುತ್ತಾಳೆಯೇ ಹೊರತು ಹೆಂಡತಿಯಾಗಲ್ಲ ಯಾಕೆಂದರೆ ಹೆಂಡತಿ ಸ್ಥಾನ ಕೊಡಲು ಆಕೆ ಕೆಳಗಿನ ವರ್ಗದವಳೇ ಆಗಿದ್ದಾಳೆ. ಹೆಣ್ಣು ಗಂಡಿನ ಸಂಬಂಧವಿದ್ದಲ್ಲಿ ಭಾವನೆಗಳಿಗಿಂತ ವರ್ಗ, ಜಾತಿಗಳೇ ಮುಖ್ಯವಾಗುವುದನ್ನು ಈ ಮಾತಿನಿಂದ ತಿಳಿಯಬಹುದು. "ಆ ಸಾವ್ಕಾರ ಗುಲ್ಲಿಂಗಪ್ಪನ ಮಗ ಲಿಂಗರಾಜಪ್ಪಗ ಏನು ಧಾಡಿ ಬಡ್ದಾದಂತೀನೀ...."[15] ವರ್ಗ, ಜಾತಿಯ ನಿಯಮಗಳಿರುವುದು ಮೇಲ್ವರ್ಗದಲ್ಲಷ್ಟೇ ಅಲ್ಲ, ಕೆಳವರ್ಗದಲ್ಲಿಯೂ ಜಾತಿ ಎಂಬುದಿರುವುದಕ್ಕೆ ಮಲ್ಲವ್ವನ ಮಾತುಗಳೇ ಸಾಕ್ಷಿಯಾಗಿವೆ. "ಕುಲಾ ಅಲ್ದ ಕುಲದವನ ಕೈ ಹಿಡ್ದು ಹಾದರಕ ಬಿದ್ದಾಳ ಇಕೀ... ನಮ್ಮಂದ್ಯಾಗ ಹಿಂತಾ ಹಲ್ಕಟ್ ದಂಧಾಕ್ಕ ಯಾರು ಬಿದ್ದಿದ್ದಿಲೋ ತಮ್ಮಾ...."[16] ಜಾತಿಯಷ್ಟೇ ಅಲ್ಲದೇ ಇಲ್ಲಿ ವಾರಸುದಾರಿಕೆ ಹೆಣ್ಣಿನದಲ್ಲ, ಗಂಡಿನದೇ ಆಗಿದೆ. ಆಕೆ ಕುಟುಂಬದ ಸದಸ್ಯೆಯಾದರೂ ಸಹ ಆಕೆಯ ಪಾತ್ರ ಗೌಣವಾಗುತ್ತಿರುವುದು. ಅವಳ ಆ ಮಾತುಗಳಲ್ಲೇ ಇದೆ. ಇದನ್ನು ರೂಪಿಸಿರುವುದಾದರೂ ಯಾವುದು?

ಕುಲಕರ್ಣಿ, ಸಾವ್ಕಾರ ವರ್ಗದ ಪ್ರತಿಷ್ಠೆಯಿಂದಲೇ ಹುಲಿಸಿಂಹಕ್ಕಿಂತಲೂ ಮಿಗಿಲಾದವರಾಗಿದ್ದಾರೆ. ಮೇಲ್ವರ್ಗವನ್ನು ವಿರೋಧಿಸಿ, ಎದುರಾಳಿಯಾಗಿ ಮಾತನಾಡುವುದು ಒಂದು ಕಡೆಯಾದರೆ, ಇಂತಹ ಮಾತುಗಳನ್ನಾಡುವುದು ಕೆಳವರ್ಗವೇ ಎಂಬುದು ಮತ್ತೊಂದು ಅಂಶವಾಗಿದೆ. ಹೆಣ್ಣು ಎಂಬುದು ಎಲ್ಲದಕ್ಕೂ ಮೂಲವೆಂಬುದು ಒಂದು ಕಡೆಯಾದರೆ ಆಕೆಗೆ ಹೆಚ್ಚು ಮಡಿವಂತಿಕೆ, ಮರ್ಯಾದಸ್ಥ ಗುಣಗಳಿರಬೇಕೆಂಬುದರ ಸಮಾಜದ ಪ್ರತಿಪಾದನೆ ಈ ಮಾತಿನಲ್ಲಿದೆ. "ಲಿಂಗರಾಜಾಯೇನೋ ಗಂಡಸಮಗಾ..... ಹತ್ತು ಹೆಂಗಸರಿಗಿ ಮಗ್ಗಲದಾಗಿಟ್ಕೊಂಡು ಮಕ್ಕೋತಾನಂತ ತಿಳಿ, ಗಂಡಸರಿಗೇನೂ ಐಬಿಲ್ಲ!"[17]

ಕೆಳವರ್ಗಕ್ಕೆ ಕಾರ್ಖಾನೆ, ಗಿರಣಿಯಲ್ಲಿಯೇ ಕೆಲಸ ಎಂಬುದನ್ನು ನಾಗವ್ವನ ಮಾತುಗಳಿಂದ ತಿಳಿಯಬಹುದು. "ಅದಕ್ಕೇನು ತಿಳೀತಾದ ಬಿಡು, ಶಾರಪಟ್ಟಣದಾಗಿನ ಶೋಕಿಗಿ ಮಳ್ಳಾಗ್ಯಾದ ಪೋರಿ,.. ಗೋಳ್ಯಾದ ನೆಂಟಸ್ತನ ಬ್ಯಾಡಂದ್ರ ಬಿಡು"[18] ಮಲ್ಲಪ್ಪ-ಮಲ್ಲವ್ವ, ಫತರೂ-ನಜಮಾ, ಹಾಲಪ್ಪ-ಶಾಣಮ್ಮ, ಕಲ್ಯಾಣಿ-ಬೆಳ್ಳಿಯರದು ಒಂದು ರೀತಿಯ ಅರ್ಥಪೂರ್ಣ ದಾಂಪತ್ಯ ಸಂಬಂಧವಾದರೆ ಮಾರ್ತಾಂಡ-ಕಾಶಿ, ಲಿಂಗರಾಜ-ನೀಲಮ್ಮ, ಲಿಂಗರಾಜ-ಕಾಶಿಯರ ಸಂಬಂಧ ಶಿಥಿಲವಾದುದೆನ್ನಿಸುತ್ತದೆ. ಕಾಶಿ-ಮಾರ್ತಾಂಡನದು ವರ್ಗ, ಲಿಂಗಗಳನ್ನು ಮೀರಿ ಮಾನವೀಯ ಸ್ತರದಲ್ಲಿ ನಿಂತರೆ ಕಾಶಿ-ಲಿಂಗರಾಜನದು ವರ್ಗ ವ್ಯವಸ್ಥೆಯನ್ನು ಮೀರಿದರೂ ಅದು ವರ್ಗದಲ್ಲಿಯೇ ಉಳಿಯುತ್ತದೆ. ನೀಲಮ್ಮ ಮೇಲ್ವರ್ಗದವಳಾದರೂ ಆಕೆ ಹೆಣ್ಣು ಎಂಬುದರಿಂದಲೇ ತನ್ನ ವರ್ಗದಲ್ಲೇ ತಾನು ಶೋಷಿತಗಳಾಗಿ ಹಾಗೆಯೇ ಗಂಡನಿಗೆ ಹೆಂಡತಿಯಾಗುವುದನ್ನೇ ವಿರೋಧಿಸಿ ಮಗುವಿಗೆ ತಾಯಿಯಾಗಿದ್ದಾಳೆ. ಇದೂ ಸಹ ಲಿಂಗ ಪ್ರಭೇದವನ್ನು ನಿರ್ವಚಿಸುವ ಸಾಧನವಾಗಿದೆ. ಹೆಣ್ಣು ಇಲ್ಲಿ ತಾಯಿಯ ನೆಲೆಯಿಂದ ಹೆಣ್ಣಾಗಿಯೇ ಗುರ್ತಿಸಿಕೊಳ್ಳುತ್ತಿದ್ದಾಳೆ. ನೀಲಮ್ಮ ಮೇಲುವರ್ಗದವಳಾದರೂ, ಸೋಲಲೇ ಬೇಕು ಯಾಕೆಂದರೆ ಆಕೆ ಹೆಣ್ಣಲ್ಲವೇ ? ನೀನು ಸರಿಯಾದ ದಾರಿಗೆ ಬರಲಿಲ್ಲ ಅಂದರೆ ನಾನು ತವರು ಮನೆಗೋಗುತ್ತೇನೆ ಎನ್ನುವ ನೀಲಮ್ಮ ತನ್ನ ಮಗನಿಗಾಗಿ ಗಂಡನೊಂದಿಗೆ ರಾಜಿಯಾಗುತ್ತಾಳೆ. ಹೆಣ್ಣು ತಾನು ಬಲಿಪಶುವಾಗಿರುವುದು ಬದುಕಿನಲ್ಲಿ ಎಲ್ಲಾ ನೆಲೆಗಳಿದ್ದರೂ ಬದುಕನ್ನೂ ಹೊರತುಪಡಿಸಿಲ್ಲ ಎಂಬ ತಿಳುವಳಿಕೆ ಬಂದಾಗ ಇಲ್ಲಿ ನೀಲಮ್ಮನಿಗಿರುವಂತಹ ಸ್ಥಿತಿಯಾಗಿದೆ. ಕೆಳಗಿನ ವರ್ಗವಾಗಿ ಹೆಣ್ಣಾಗಿ ಗಂಡನ ಕ್ರೌರ್ಯತೆ, ಶೋಷಣೆಗೊಳಗಾಗುತ್ತಾ ಸಾಯುವವಳು ಕಲ್ಲವ್ವ, ಇಲ್ಲಿ ದೇಹವೇ ಮುಖ್ಯವಾಗುತ್ತದೆಯೇ ಹೊರತು ಆಕೆಯಲ್ಲ ಇದೂ ಸಹ ಅರ್ಥವೇ ಇರದ ದಾಂಪತ್ಯವಾಗಿದೆ.

ಬೇಲಿ ಇಲ್ಲದ ಹೊಲದಲ್ಲಿ ಯಾರ ದನಗಳಾದರೂ ಬಂದು ಮೇಯಬಹುದು ಎಂದು ಇರಪಾಗಸೆಪ್ಪ ಬೆಳ್ಳಿಯನ್ನು ಕುರಿತು ಹೀಗೆ ಹೇಳುತ್ತಾನೆ. "ನೀ ಒಪಗೊಂಡ್ರ ನಾ ರಾತ್ರಿ ನಿನ್ ಮನೀಗಿ ಬರ್ತಿನೆಂತ......" ಎಂಬ ಗೌಡನ ಮಾತಿಗೆ ಆಕೆಯ ಮಾತಾದರೂ ಏನು? "ಯಪ್ಪಗೋಡ...... ನೀ ನೋಡ್ದರ ನಮ್ಮಪ್ಪ ಇದ್ದಂಗಿದ್ದೀ..... ನಿನ್ನಂಥವನ ಬಾಯಿಲಿಂದ ಹಿಂತಾ ಮಾತು ಬರಬಾರ್ದು. ನನ್ನ ವಾರಗಿ ಮಗಳಾಳಲ್ಲ ನಿನಗ...... ತೆಗಿ ಅಕಾಡಿ ಏನು ಮಾಡಂತ ಆಡ್ತಿ......"[19] ಎಂಬುದು ಆಕೆಯ ಉತ್ತರವಾದರೂ ಭಾವನಾತ್ಮಕವಾಗಿಯೇ ಹೆಣ್ಣಿನ ಪ್ರತಿರೋಧದ ಧ್ವನಿಯಿಲ್ಲಿದೆ.

ಧರ್ಮ ಎಂಬುದು ಸಹ ಪ್ರಧಾನ ಮತ್ತು ಅಧೀನ ನೆಲೆಗಳನ್ನು ಹುಟ್ಟು ಹಾಕುತ್ತದೆ. ಅದೂ ಲಿಂಗ, ವರ್ಗದ ಹಿನ್ನೆಲೆಗಳಲ್ಲಿಯೆ. ಜೋಗತಿಯನ್ನು ರೂಪಿಸುವಂತಹ ಈ ಸಮಾಜ ಮೇಲ್ವರ್ಗದ ಹೆಣ್ಣುಗಳಿಗಲ್ಲ ಅಥವಾ ಕೆಳ ಮತ್ತು ಮೇಲ್ವರ್ಗದ ಪುರುಷನಿಗು ಅಲ್ಲ. ಕೆಳವರ್ಗದ ಸ್ತ್ರೀಗೆ ಮಾತ್ರವೆ ಆಗಿದ್ದು ಮದುವೆಯಾಗದೇ ಗಂಡು-ಹೆಣ್ಣು ಸಂಬಂಧ ಬೆಳೆಸಲು ಪ್ರಧಾನವರ್ಗ ಒಪ್ಪಿಗೆ ನೀಡಿದ ಸಂಸ್ಥೆಗಳಾಗಿವೆ. ಆಚರಣೆ ಸಂಪ್ರದಾಯಗಳ ಮೂಲಕ ಅವುಗಳನ್ನು ಇಂದಿಗೂ ಮೌಲ್ಯಗಳಾಗಿ ಉಳಿಸಿಕೊಂಡು ಬಂದಿದೆ. ಲಿಂಗ ಸಮಾನತೆಯ ಹುಡುಕಾಟದ ಪ್ರಶ್ನೆ ಇಲ್ಲಿ ಬರುವುದಿಲ್ಲ• ಏಕೆಂದರೆ ಧರ್ಮ ಪ್ರಶ್ನಾತೀತವಾದುದು ಎಂಬ ಮೂಲಭೂತವಾದಿತನವೇ ಕಾರಣವಾಗಿದೆ. ಜೋಗಿಣಿಯನ್ನು ಲೈಂಗಿಕ ದಾಸಿಯರನ್ನಾಗಿ, ಅತೃಪ್ತ ಕಾಮುಕರನ್ನಾಗಿಸಿ, ತಾವು ಮಾಡಿದರೆ ಶ್ರೇಷ್ಠತೆ ಮತ್ತು ಪ್ರತಿಷ್ಠೆಯ ಸಂಕೇತ, ಹೆಣ್ಣು ಮಾಡಿದರೆ ಹೀನಾಯ ಎಂಬುದನ್ನು ಪ್ರಧಾನ ಸಮಾಜವೇ ನಿರ್ಮಾಣಮಾಡಿದ್ದು ಅಧಿಕೃತ ಸಂಸ್ಥೆಯನ್ನಾಗಿಸಿದೆ.

ಆದರೂ ಸಹ ಈ ಕಾದಂಬರಿಯಲ್ಲಿ ಜೋಗಿಣಿಯಾಗಿದ್ದು ಆತ್ಮಹತ್ಯೆಗೆ ಒಳಗಾಗುವಂತಹ ನೀಲವ್ವ, ಜೋಗಿಣಿಯಾಗಿ ಕವಡೆ ಸರಗಳನ್ನು ಕಿತ್ತೆಸೆದು ಮದುವೆಯಾಗುವ, ಊರಿನಿಂದ ತನ್ನ ತಂದೆ ತಾಯಿಯರನ್ನು ಕರೆದುಕೊಂಡು ಹೋಗುವ ತುಳಜಾ ಲಿಂಗ, ವರ್ಗಗಳಿಂದಲೇ ಪ್ರತಿಭಟಿಸುವ ನಿಲುವನ್ನು ಹೊಂದಿದ್ದಾರೆ. ಗೀತಾರವರ ಕಾದಂಬರಿಗಳಲ್ಲಿ ಹೆಣ್ಣು, ಸ್ತ್ರೀತ್ವ, ಜೋಗಿಣಿ ತಾಯ್ತನಗಳಿಂದ ಮಹಿಳೆಯರು ಪ್ರತಿನಿಧೀಕರಣಗೊಳ್ಳುವುದೇ ಘನತೆ ಗೌರವಗಳಿಲ್ಲದ ಅಸಮಾನ ಸ್ಥಿತಿಗಳಲ್ಲಿ ಎನ್ನಬಹುದಾಗಿದೆ. ಈ ಮೂರು ಕಾದಂಬರಿಯಲ್ಲಿಯೂ ವಿವಾಹ, ದಾಂಪತ್ಯ, ಕುಟುಂಬ ಅರ್ಥಪೂರ್ಣತೆಯಿಂದ ಕೂಡಿರದೇ ಇವುಗಳಿರುವುದು, ಸಾಂಸ್ಕೃತಿಕ ರಾಜಕಾರಣದ ನೆಲೆಯಲ್ಲಿ ತಮ್ಮ ಅಧಿಕಾರ ಸ್ಥಾಪಿಸಲು ಇರುವಂತಹ ಪ್ರಾಥಮಿಕ ಘಟಕಗಳೆನಿಸುತ್ತವೆ. ಬೆಳಗಿನಿಂದಲೇ ಕುಡಿತದ ನಿಶೆಯೇರಿಸಿಕೊಂಡು ಹೊಟ್ಟೆಪಾಡಿಗಾಗಿ ದುಡಿದು, ದೇಹ ಸುಖದ ಮೂಲಕ ಸಂತಾನೋತ್ಪತ್ತಿಗೆ ಕಾರಣವಾಗಿ ಹರೆಯವನ್ನು ಕಳೆದುಕೊಳ್ಳುವ ಪ್ರಕ್ರಿಯೆ ಎನ್ನಿಸುತ್ತದೆ.

ಈ ಮೂರು ಕಾದಂಬರಿಗಳಲ್ಲಿ ಭಾಷೆಯೂ ಲಿಂಗತಾರತಮ್ಯದ ನೆಲೆಯಲ್ಲಿ ಸೇರುತ್ತದೆ. ಈ ಭಾಷೆಗೂ ಲಿಂಗ, ವರ್ಗವೇ ಮುಖ್ಯಕಾರಣವಾಗಿರುತ್ತದೆ. ಹೆಣ್ಣು ಗಂಡುಗಳ ನಡುವೆ ಇರುವ ಜೈವಿಕ ಭಿನ್ನತೆಯ ಹಾಗೆ ಭಾಷಿಕ ಸ್ವರೂಪದ ಧ್ವನಿ ಉಚ್ಚಾರಣೆ, ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆಯು ಸೃಷ್ಟಿಸಿದ ಹೆಣ್ಣು-ಗಂಡುಗಳ ಸುರೂಪ-ಕುರೂಪ ಸಂಬಂಧಗಳನ್ನು ಹಾಗೂ

ಅವರೀರ್ವರ ಪ್ರಧಾನ ಮತ್ತು ಅಧೀನ ಸಂಬಂಧಗಳನ್ನ ಹೊರಗೆಡಹುವ ಶ್ರೇಣೀಕರಣವನ್ನು ಕೂಡಾ ಈ ಭಾಷಿಕ ಸ್ವರೂಪತೆರೆದು ತೋರಿಸುತ್ತದೆ. ಈ ಕಾದಂಬರಿಗಳ ಭಾಷೆ ಹೈದರಾಬಾದ್‌ನ ಪ್ರಾದೇಶಿಕತೆಯನ್ನೊಳಗೊಂಡಿದ್ದು ಗಂಡು ಭಾಷೆಯಾಗಿದೆ. ಆದರೂ ಇಲ್ಲಿನ ನಿರೂಪಣೆ ಹೆಣ್ಣಿನದಾಗಿರುವುದರಿಂದ ಕೆಳವರ್ಗದ ಹಾಗೂ ಹೆಣ್ಣಿನ ಭಾಷೆ ನೋವು, ಅಸಹಾಯಕತೆಯಿಂದ ಕೂಡಿದ್ದು ಮೇಲ್ವರ್ಗದವರಲ್ಲಿ ಅಧಿಕಾರಯುತವಾದಂತಹ ಆಜ್ಞೆಗಳನ್ನು ಒಳಗೊಂಡಿದೆ. 'ಹಳ್ಯಾದ ಹರೇದ ಮಗಳೀಗೆ ಬಕ್ಕಳ ದಿನಾ ಮನ್ಯಾಗಿಟ್ಕೊಂಡು ಕೂಡ್ರಾದು ಅಂದ್ರ ಹದ್ದಗೊಳ ಕಣ್ಣಲಿಂದ ಕೋಳಿಮರೀಗಿ ಕಾಯ್ದಾಂಗ...'[20] ಬದುಕು. 'ಹೂಂ...... ಈಟೂ ಗೊತ್ತಗಲಿಲ್ಲಂದ್ರೆ ಹ್ಯಾಂಗೋ ನನ್ ಹಾಟಗಳ್ಳಾ..... ಈಳಿಗ್ಯಾನ ಸೋಬ್ತಿ ಮಾಡಿ ಇಪ್ಪತ್ತೊರ್ಸ ಕಳದೀನಿ......'[21] ಎಂಬ ನಾಗವ್ವಾಯಿ ಮಾತು, 'ಅಳಬ್ಯಾಡ ಮಗಾ...... ತುಟಿ ಕಚ್ಚಿ ಬ್ಯಾನಿ ತಿನ್ಬೇಕವ್ವಾ.....'[22] ಜೋಗತಿಯರು ಜೋಗತಿಯರಾಗಿರುವುದರಿಂದಲೇ ಕೆಲವು ನಿರ್ದಿಷ್ಟ ಬಗೆಗಳಲ್ಲಿ ಮಾತನಾಡುವಂತಹ ಅವಕಾಶವಿರುತ್ತದೆ. ಇದು ಅಭಿವ್ಯಕ್ತಿಯ ಮತ್ತೊಂದು ಸಾಧ್ಯತೆ ಎನ್ನಬಹುದು. "ಹುವ್ವಿನಂಥಾ ಗಲ್ಲದಕ್ಕೀ..."[23] ಎಂಬಂತಹ ಛೇಡಿಸುವಂತಹ ಮಾತುಗಳೂ ಇವೆ.

ಇವೆಲ್ಲ ಸಂದರ್ಭದಲ್ಲಿ ಸ್ಥಿರ ಆದರ್ಶಗಳನ್ನು ಪ್ರತಿಪಾದಿಸುವ, ಸಮರ್ಥಿಸುವ ಪುರುಷ ಪ್ರಧಾನತೆಯ ಭಾಷೆಯೇ ಈ ಕಾದಂಬರಿಗಳಲ್ಲಿ ಅಧಿಕಾರದ ಮಾಧ್ಯಮವಾಗಿದೆ ಎನ್ನಬಹುದು. ಪಿತೃಪ್ರಧಾನತೆ ಮತ್ತು ಲಿಂಗ ಪ್ರಭೇದ ಎಂಬುದೇ ಯಜಮಾನ್ಯ ಸ್ವರೂಪದ ಅಧಿಕಾರ ಕೇಂದ್ರಗಳಾಗಿದ್ದು ಇವುಗಳ ಪ್ರತ್ಯೇಕತೆಗಳು ಎಲ್ಲಿಯವರೆಗೆ ಎತ್ತಿ ಹಿಡಿಯಲ್ಪಡುತ್ತವೆಯೋ ಅಲ್ಲಿಯವರೆಗೂ ಸ್ತ್ರೀವಿಮೋಚನೆ, ಅಸಮಾನತೆ ಎಂಬ ಪ್ರಶ್ನೆಗಳು ಹಾಗೆಯೇ ಉಳಿಯುತ್ತವೆ.

**ಅಡಿ ಟಿಪ್ಪಣಿಗಳು**

1. ಸುಜ್ಞಾನಮೂರ್ತಿ ಬಿ : ಗೋಡೆಗಳ ಅಡಿಯಲ್ಲಿ, ಪುಟ–4
2. ಗೀತಾನಾಗಭೂಷಣ : ಹಸಿಮಾಂಸ ಮತ್ತು ಹದ್ದುಗಳು, ಪುಟ–15
3. ಅದೇ, ಪುಟ–12
4. ಅದೇ, ಪುಟ–47
5. ಅದೇ, ಪುಟ–9
6. ಅದೇ, ಪುಟ–50
7. ಕವಿತಾರೈ.ಬಿ.ಆರ್: ಮಹಿಳೆ –ಅಸ್ತಿತ್ವದ ಸಂಕಥನ, ಪುಟ–237

8. ಗೀತಾ ನಾಗಭೂಷಣ : ಆಸರೆಗಳು, ಪುಟ–5

9. ಅದೇ, ಪುಟ–6

10. ಅದೇ, ಪುಟ–8,9

11. ಅದೇ, ಪುಟ–119

12. ಅದೇ, ಪುಟ–44

13. ಅದೇ, ಪುಟ–34

14. ಗೀತಾ ನಾಗಭೂಷಣ : ಬದುಕು, ಪುಟ–86

15. ಅದೇ, ಪುಟ–93

16. ಅದೇ, ಪುಟ–96

17. ಅದೇ, ಪುಟ–105

18. ಅದೇ, ಪುಟ–100

19. ಅದೇ, ಪುಟ–428, 429

20.ಗೀತಾನಾಗಭೂಷಣ : ಹಸಿಮಾಂಸ ಮತ್ತು ಹದ್ದುಗಳು, ಪುಟ–5

21. ಗೀತಾನಾಗಭೂಷಣ : ಬದುಕು, ಪುಟ–98

22.ಗೀತಾ ನಾಗಭೂಷಣ : ಆಸರೆಗಳು 24

23.ಗೀತಾನಾಗಭೂಷಣ : ಬದುಕು, ಪುಟ–204.

### 3. ಶೋಷಣೆಯ ನೆಲೆ

ಪುರುಷ ಪ್ರಧಾನ ವ್ಯವಸ್ಥೆಯಡಿಯಲ್ಲಿ ಮಹಿಳೆಯ ಶೋಷಣೆಗೆ ಆಕೆಯ ಆರ್ಥಿಕ ನಿರಾಧಾರತನವೂ ಒಂದು ಪ್ರಮುಖ ಕಾರಣ. ಇದರ ಜೊತೆಗೆ ಇನ್ನುಳಿದ ಸಂಗತಿಗಳು ಸೇರಿಕೊಂಡು ಆಕೆಯ ವ್ಯಕ್ತಿತ್ವವನ್ನು ನುಂಗಿವೆ. ಹೆಣ್ಣನ್ನು ಮನುಷ್ಯಳೆಂದು ಗುರುತಿಸಿಯೇ ಇಲ್ಲ. ಆಕೆ ಹೀಗೆ "ಕಾರ್ಯೇಷು ಮಂತ್ರಿ ಕರುಣೇಷು ದಾಸೀ..."[1] ಗಂಡಿನ ಹಿತಾಸಕ್ತಿಗನುಗುಣವಾಗಿ ಹಲವಾರು ಪಾತ್ರಗಳನ್ನು ಮುಖವಾಡಗಳನ್ನು ಹಾಕಬೇಕಾಗುತ್ತದೆ. ಮತ್ತು ಹಾಗೇ ಹಾಕಬೇಕು ಎಂಬುದನ್ನು ನಿರ್ದೇಶಿಸುತ್ತಲೇ ಸಾಂಸ್ಕೃತಿಕ ಮತ್ತು ಸಾಮಾಜಿಕ ಮೌಲ್ಯಗಳನ್ನಾಗಿಸಿದ್ದಾರೆ. ಈ ವ್ಯವಸ್ಥೆಯಲ್ಲಿ ಹೆಣ್ಣಿನ ಮನಸ್ಸು ಕೂಡಾ ಪುರುಷನಿಂದಲೇ ನಿಯಂತ್ರಿತವಾಗಿರುವುದರಿಂದ ಆಕೆ ಇಂದು ಅದರಿಂದ ಮುಕ್ತಿ ಹೊಂದಿ ತನ್ನನ್ನು ತಾನು ಗುರುತಿಸಿಕೊಳ್ಳುವ ಶೋಧದಲ್ಲಿರುವಳು. ಹೀಗೆ ಶೋಧಿಸುವ ಹೆಣ್ಣು ತಾನು ಶೋಷಣೆಗೆ ಒಳಗಾಗಿರುವುದಾದರೂ ಯಾವುದರಿಂದ ಎಂದು ತಿಳಿದು ಆಕೆ ಈ ರೀತಿ ಪ್ರತಿರೋಧವನ್ನು ಒಡ್ಡುತ್ತಾಳೆ 'ಕಾಣಲಿಲ್ಲ ನಿಮಗೆ..ಹೃದಯ ಉಂಟೆಂದು.'[2]

ಶೂಲಾಮಿತ್ ಫೈರ್ ಸ್ಟೋನ್ ಹೇಳುವ "ಜೀವ ಶಾಸ್ತ್ರವೇ ಮಹಿಳೆಯ ವಿಧಿ, ಅದೇ ಸ್ತ್ರೀ ಶೋಷಣೆಯ ಕೇಂದ್ರನೆಲೆ"[3] ಎಂಬ ಮಾತಿನಂತೆ ಸ್ತ್ರೀ ಶೋಷಣೆ ಜೀವಶಾಸ್ತ್ರ ಮಾತ್ರವೇ ಆಗಿರದೇ ಜಾತಿ, ವರ್ಗ, ಧರ್ಮ, ಇವೇ ಮೊದಲಾದ ಸಾಮಾಜಿಕ ಸಂಸ್ಥೆಗಳಾಗಿದ್ದು ಶೋಷಣೆಯ ಮುಖ ಒಂದೇ ಆಗಿರದೇ ಬಹುಮುಖಿಯಾಗಿದೆ. ಶೋಷಣೆ ಎಂಬುದು ಚರಿತ್ರಾತೀತವಾಗಿದ್ದು ಕಾಲ, ದೇಶ, ಸಂಸ್ಕೃತಿಗಳೆಂಬ ಗಡಿಯನ್ನು ಮೀರಿದ್ದಾಗಿದೆ. ಇಂತಹ ಶೋಷಣೆಗಳಿಗೆ ಒಳಗಾಗುತ್ತಲೇ ಇದ್ದು ಮುಖಾಮುಖಿಯಾಗುವುದನ್ನು ಗೀತಾನಾಗಭೂಷಣರ ಕಾದಂಬರಿಗಳಲ್ಲಿ ಕಾಣಬಹುದಾಗಿದೆ.

**ಹಸಿಮಾಂಸ ಮತ್ತು ಹದ್ದುಗಳು:** ಈ ಕಾದಂಬರಿಯಲ್ಲಿ ವರ್ಗ ಮತ್ತು ಲಿಂಗಗಳೇ ಶೋಷಣೆಗೆ ಅಧಿಕಾರ ಕೇಂದ್ರಗಳಾಗಿರುವುದನ್ನು ಗಮನಿಸಬಹುದು. ಶೋಷಣೆ ಆರಂಭ ಆಗುವುದೇ ಒಬ್ಬರನ್ನು ನಿಯಂತ್ರಣದಲ್ಲಿರಿಸಿಕೊಳ್ಳಲು ಇನ್ನೊಬ್ಬರು ಮಾಡುವ ಪ್ರಯತ್ನದಿಂದಾಗಿಯೇ ಆಗಿದೆ. ಇಲ್ಲಿ ವರ್ಗದಿಂದ ಶೋಷಣೆಗೊಳಗಾಗಿರುವವರು ದಲಿತ ಸಮುದಾಯ ಅಂದರೆ ಸಮಾಜ ನಿರ್ಮಾಣ ಮಾಡಿರುವಂತಹ ಕೆಳವರ್ಗದವರಾದರೆ, ವರ್ಗ ಹಾಗೂ ಲಿಂಗ ಎರಡರ ದೃಷ್ಟಿಯಿಂದಲೂ ಶೋಷಿತರಾಗಿರುವವಳು ಹೆಣ್ಣು. ಈ ಹಿನ್ನೆಲೆಯಿಂದ ಈ ಕಾದಂಬರಿಯ ಅಧ್ಯಯನ ಶೋಷಣೆಯ ನೆಲೆಯಲ್ಲಿ ಸೂಕ್ತವೆನಿಸುತ್ತದೆ.

ಈ ಕಾದಂಬರಿಯಲ್ಲಿ ಶೋಷಣೆಗೊಳಗಾಗಿರುವ ಮತ್ತು ಮುಖಾಮುಖಿ ಯಾಗುತ್ತಿರುವ ಪಾತ್ರಗಳೆಂದರೆ ಫಕೀರಪ್ಪ ಮತ್ತು ಲಚ್ಚಿಯರದು. ಫಕೀರಪ್ಪ ಅಧೀನ ವರ್ಗ ಎನಿಸಿಕೊಂಡಿದ್ದು ಇದರಿಂದಾಗಿಯೇ ಶೋಷಣೆಗೊಳಗಾಗಿರುವುದನ್ನು ಗಮನಿಸಬಹುದು. ಕುಲಕರ್ಣಿ ಹೇಳುವಂತಹ "ಏನ್ಲಾ ಪಕೀರ್‍ಯಾ ಸೂಳ್ಯಾಮಗನೇ.... ಈ ಹಳ್ಳಿ ರೀತಿ ರಿವಾಜ ಅಂಟ ಗೊತ್ತಿಲ್ಲೇನೋ?"[4] ಎಂಬ ಕುಲಕರ್ಣಿಯ ಮಾತಿಗೆ ಫಕೀರಪ್ಪನ ಉತ್ತರವಾದರೂ ಏನು? ಶೋಷಿತನಾಗಿಯೇ ಉತ್ತರ ಕೊಡುವ ಮೂಲಕ ತನ್ನ ಪ್ರತಿರೋಧವನ್ನು ಒಡ್ಡಿದರೂ ಹೆಣ್ಣನ್ನ ದೈಹಿಕವಾಗಿಯೇ ಅಪೇಕ್ಷೆ ಮಾಡುತ್ತಾ ಆಕೆಯನ್ನು ಲಿಂಗದ ಮೂಲಕವಾಗಿಯೇ ಶೋಷಣೆಗೆ ಒಳಪಡಿಸುತ್ತಿರುವುದನ್ನು ಈ ಮಾತಿನಿಂದ ತಿಳಿಯಬಹುದು." ಇಲ್ಲಿ ಅಸಹಾಯಕತೆ ಮತ್ತು ಆರ್ಥಿಕ ಆಯಾಮಗಳು ಒಂದನ್ನೊಂದು ಪ್ರಭಾವಿಸುತ್ತಾ ಸಾಗುತ್ತವೆ. ಲೈಂಗಿಕ ಶೋಷಣೆ ಕೇವಲ ಹೆಣ್ಣಿನ ಮೇಲೆ ಮಾತ್ರ ನಡೆಯುವ ಕ್ರಿಯೆ ಎಂದು ಸರಳೀಕರಿಸುವಂತಿಲ್ಲ. ಗಂಡಿನ ಮನಸ್ಸಿನ ಮೇಲೂ ಪ್ರಭಾವ ಬೀರುತ್ತದೆ. ಈ ಮಾತುಗಳನ್ನು ಕೇಳಿದ ಫಕೀರಪ್ಪ ತನ್ನ ನೋವನ್ನು ಶಮನ ಮಾಡಿಕೊಳ್ಳುವುದಾದರೂ ಯಾವಾಗ? ಕುಲಕರ್ಣಿಯ ಆಳುಮಗ ಹೊಲೆಯರ ಕಾಳ್ಯಾ ಮತ್ತು ಕುಲಕರ್ಣಿಯ ಹೆಂಡತಿಯ ಬಾಳೆಯ ತೋಟದಲ್ಲಿ ಜೊತೆಗಿದ್ದಾಗ, ಏಕೆಂದರೆ ತಾನು ಅಧೀನ ವರ್ಗದವನಾಗಿರುವಂತಹ ಫಕೀರಪ್ಪ ತನ್ನ ಜಾತಿಯವನಾದ ಕಾಳ್ಯಾನಾದರೂ ಹಳ್ಳೀಯ ರೀತಿ ರಿವಾಜುಗಳನ್ನು ಮೀರುತ್ತಿದ್ದಾನೆಂಬ ಸಂತೋಷವಿದೆ, ಸಮಾಧಾನವಿದೆ. ಸಮಾಧಾನವೇ ಫಕೀರಪ್ಪನ ಪ್ರತಿಭಟನೆಯಾಗಿದೆ.



ಗೌಡರ ಕೋಣ ಸತ್ತಿದೆ ಎಂದು ಹೇಳಿದ ಕಾಶಪ್ಪನ ಮಾತಿಗೆ ಫಕೀರಪ್ಪನ ಮಾತಾದರೂ ಏನು? 'ಕ್ವಾಣಾ ಸತ್ತದಾ...? ಬೇರೇ ಕಿತ್ತ್ಯಾರ'[5] ಎಂಬ ನೋವಿನಿಂದ ಕೂಡಿದ ಉತ್ತರವಿದೆ. ಇದರಿಂದಾಗಿ ಸತ್ತ ಕೋಣ, ಹಸುವನ್ನು ತಿನ್ನುವುದು ದಲಿತರೇ ಆಗಿದ್ದಾರೆ ಎಂಬುದು ತಿಳಿದು ಬರುತ್ತದೆ. ಇಂತದೇ ಚಿತ್ರಣವಿರುವ ಕುಂ.ವೀ.ರವರ 'ದೇವರಹೆಣ' ಕಥೆಯಲ್ಲಿ ಬರುವಂತ ಕೊಣ್ಣಿಯ ಪಾತ್ರ ಇದಕ್ಕೆ ಉತ್ತಮ ನಿದರ್ಶನವಾಗಿದೆ. ಅಲ್ಲದೇ ಮುತ್ತಜ್ಜನ ಕಾಲದಿಂದಲೂ ಈ ಗೌಡ ಕುಲಕರ್ಣಿಯರು ಊಳಿಗಮಾನ್ಯತೆಯ ಮೂಲಕ ಶೋಷಣೆಗೊಳಪಡಿಸುತ್ತಿರುವುದನ್ನು ಕಾಣಬಹುದು. "ಅಜ್ಜ ಮುತ್ತಜ್ಜನ ಕಾಲದಿಂದ ಬಡವರ ಹೊಲಗಳೆಲ್ಲ ಅವರಕಾಲ ಕೆಳಗೆ ಗಿರವಿ ಬಿದ್ದೂ ಬಿದ್ದೂ ಒದ್ದಾಡಿ, ಬಡ್ಡಿ, ಚಕ್ರಬಡ್ಡಿ ಅಂತ ಸೇರಿಸಿ ಒಂದು ದಿನ ಅವೆಲ್ಲ ಹೊಲಗಳನ್ನು ಹಳ್ಳಿಯ ಹೆಡ್ಡರ ಹೆಬ್ಬೆಟ್ಟೊತ್ತಿಸಿಕೊಂಡು ತಮ್ಮ ಹೆಸರಿಗೆ ಮಾಡಿಸಿಕೊಂಡಿದ್ದು". ಈ ಮಾತು ತಾವು ಶೋಷಣೆಗೊಳಗಾಗಿರುವುದು ತಲೆಮಾರುಗಳಿಂದಲೇ ಎಂದು ಹೇಳುತ್ತದೆ.

ಫಕೀರಪ್ಪನದು ಈ ರೀತಿಯ ಪ್ರತಿಭಟನೆಯಾದರೆ ಕುಲಕರ್ಣಿಯ ಹೊಲದಲ್ಲಿ ಊಳಿಗ ಮಾನ್ಯತೆಯಿಂದಲೇ ದುಡಿಯುತ್ತಿರುವವನ ಕಾಶೀನಾಥನ ಪರಿಸ್ಥಿತಿಯಾದರೂ ಏನು? "ಮಾಲಕರೇ, ಮಳಿ ಬರಾತನಕಾ ನಾ ನಿಂಬಲ್ಲಿ ಕೆಲಸಕ್ಕೆ ಬರಂಗಿಲ್ರಿ ಯಪ್ಪಾ ಸಡಕ ಹಾಕಲಕ್ ಹೋಗ್ತೀನ್ರಿಯಪ್ಪಾ...ಎಂದ ಕಾಶೀನಾಥನ ಮಾತುಗಳು ಕಿವಿಗೆ ಬಿದ್ದಿದ್ದೇ ತಡ ಕುಲಕರ್ಣಿ ಕೆಂಡನಾದನು...ಮಾಡುಹು!"[6] ಎಂಬ ಆಜ್ಞೆಯ ಮಾತೇ ಆಗಿದೆ. ಇದಕ್ಕೆ ವಿರುದ್ಧವಾಗಿ ಕಾಶೀನಾಥ ಮಾತಾಡೋ ಹಾಗಿಲ್ಲ. ಆದರೂ ತನ್ನ ಜಾತಿಯವಳೇ ಆದ ಲಚ್ಚಿಯ ಮೇಲೆ ತಾನು ಶೋಷಣೆ ಮಾಡುತ್ತಾನೆ. ಅಧೀನ ವರ್ಗದಲ್ಲಿ ಈತನೂ ಸಹ ಶೋಷಕ ವರ್ಗದ ಪ್ರತಿನಿಧಿಯಾಗಿದ್ದಾನೆ. ಎನಿಸುತ್ತದೆ. ಲಚ್ಚಿ ಕುಂಬಳ ಕಾಯಿಯ ಕಳುವಿನ ಆರೋಪವನ್ನು ಹೊತ್ತು ಜೈಲಿಗೆ ಹೋದಾಗ ಆಕೆಯ ಮೇಲೆ ಅಲ್ಲಿ ಅತ್ಯಾಚಾರವಾದಂತಹ ಸುದ್ಧಿಯನ್ನು ತಿಳಿದಂತಹ ಕಾಶಿನಾಥನ ಸ್ಥಿತಿಯೇನು. ಬೇರೆಯವಳನ್ನು ಮದುವೆಯಾಗಿ ಕುಲಕರ್ಣಿಯ ಖಾಸಾ ಮಗನಂತೆ ಇದ್ದದ್ದೇ ಆಗಿದೆ. ಈ ರೀತಿ ಮೇಲ್ವರ್ಗದಿಂದ ಶೋಷಕನಾಗಿ ತನ್ನ ವರ್ಗದಲ್ಲಿನ ಹೆಣ್ಣನ್ನು ಶೋಷಣೆಯನ್ನು ಮಡುತ್ತಿದ್ದಾನೆ. ಅದು ಯಾವುದರಿಂದಾಗಿ ಸ್ತ್ರೀತ್ವದಿಂದಾಗಿ, ದೇಹದಿಂದಾಗಿಯೇ ಆಗಿದೆ. ಗಂಡಿಗೆ ಇರದ ಶೀಲ ಹೆಣ್ಣಿಗ್ಯಾಕೆ ಮುಖ್ಯ ಎಂದು ಈ ಪ್ರಧಾನ ಸಮಾಜ ಭಾವಿಸಿಲ್ಲ. ಏಕೆಂದರೆ ಹೆಣ್ಣನ್ನು ಅಧೀನದಲ್ಲಿಡಲು ಅಲ್ಲವೇ?

ಹೆಣ್ಣು ಮತ್ತು ಕೆಳವರ್ಗದವಳಾಗಿ ಲಚ್ಚಿ ಅನುಭವಿಸುತ್ತಿರುವ ಶೋಷಣೆಯೇನು? ಆ ಶೋಷಣೆಗೆ ಅವಳ ಪ್ರತಿಕ್ರಿಯೆ ಏನು ಎಂಬುದನ್ನು ಈ ರೀತಿಯಾಗಿ ತಿಳಿಯಬಹುದು. ಹೆಣ್ಣು ಹೆಣ್ಣಾಗಿಯೇ ಶೋಷಣೆಗೊಳಗಾಗುತ್ತಿದ್ದಾಳೆ. ಸಾಮಾಜಿಕ ಹಾಗೂ ಲಿಂಗಾಧಾರಿತ ತಾರತಮ್ಯಗಳಿಂದ ಹೊರಬಂದರೂ ಮತ್ತೆ ಆಕೆ ಈ ಶೋಷಣೆಯ ನೆಲೆಯಿಂದ ತಪ್ಪಿಸಿಕೊಳ್ಳಲು ಸಾಧ್ಯವೇ ಆಗುತ್ತಿಲ್ಲ. ಈ ಶೋಷಣೆಯ ನೆಲೆ ಮತ್ತಷ್ಟು ಭದ್ರವೂ ಪ್ರಶ್ನಾತೀತವೂ ಆಗುತ್ತಾಹೋಗುತ್ತದೆ. ಏಕೆಂದರೆ ಸಮಾಜ ಮತ್ತು ಲಿಂಗಗಳ ಪೂರಕತೆಯೇ ಆಗಿದೆ. ತನ್ನದೇ ವರ್ಗದಲ್ಲಿ ಹೆಣ್ಣಾಗಿ ಹುಟ್ಟಿದಂತಹ ಲಚ್ಚಿ ಮತ್ತು ಆಕೆಯ ತಾಯಿಯ ಬಗ್ಗೆ ಸಂತಾಪದ ಮಾತುಗಳಿದ್ದರೂ ಹೆಣ್ಣು ಯಾವ ರೀತಿ ಶೋಷಣೆಗೊಳಗಾಗುತ್ತಿದ್ದಾಳೆ ಆ ಶೋಷಣೆಗೆ ಕಾರಣವಾದರೂ ಏನು ಗಂಡು ಮಗನಿಗೆ ಜನ್ಮ ನೀಡುವುದೇ ಆಗಿದೆ. ತಾಯ್ತನವನ್ನು ಗಂಡು ಮಗುವಿನ ಮೂಲಕವೇ ಗುರುತಿಸಿಕೊಳ್ಳಬೇಕೆ?

ಮದುವೆಯ ಪ್ರಸ್ತಾಪದಲ್ಲಿ "ನೀನು ಮಾದಿಗರ ಕುಲದವನು ಅಪ್ಪನಿಗೆ ವಯಸ್ಸಾಗಿದೆ ಅವನು ಸಾಯುವ ವರೆಗೂ ಹೀಗೆ ಇದ್ದು ಆ ಮೇಲೆ ಮದುವೆಯಾಗೋಣ" ಎಂದ ಲಚ್ಚಿಯ

ಮಾತಿಗೆ ಕಾಶೀನಾಥ ಕೃತಜ್ಞನಾದದ್ದು ಹೇಗೆ. ಕುಂಬಳ ಕಾಯಿಯನ್ನು ಕದ್ದಳು ಎಂದು ಸುಳ್ಳು ಕಳುವಿನ ಆರೋಪ ಹೊರಿಸಿ ಆಕೆ ಜೈಲಿಗೆ ಹೋದಾಗ ಅಲ್ಲಿ ಆಕೆ ಶೀಲ ಕಳೆದುಕೊಂಡಿದ್ದಾಳೆ ಎಂದು ತಿಳಿದಾಗ ಬೇರೆಯವಳೊಂದಿಗೆ ಮದುವೆಯಾಗಿ ಕುಲಕರ್ಣಿಯ ಖಾಸಾಮಗನಾಗಿಯೇ ಇಲ್ಲಿ ವರ್ಗದವಳಾಗಿ ಅದರಲ್ಲಿಯೂ 'ಲಿಂಗ'ದಲ್ಲಿ ಹೆಣ್ಣಾಗಿಯೇ ಶೋಷಿತಳಾಗುತ್ತಿದ್ದಾಳೆ. ಪ್ರತಿಭಟಿಸಲಾರದಂತಹ ಆಕ್ರೋಶ ತಮ್ಮ ಗಂಡಸರ ಮೇಲಿರುವುದನ್ನು ಹಸಿಮಾಂಸ ಮತ್ತು ಹದ್ದುವಿನ ಲಚ್ಚಿ, ನೀಲಗಂಗಾ ಕಾದಂಬರಿಯ ನೀಲಗಂಗಾ, ಮಾರಿಕೊಂಡವರು ಕಥೆಯ ಲಚ್ಚಿ, ನಿದರ್ಶನವಾಗಿದ್ದಾರೆ.

ಕುಲಕರ್ಣಿಯ ಹೊಲದಲ್ಲಿ ಹಸಿವಿನಿಂದ ಬಳಲುತ್ತಿದ್ದ ಲಚ್ಚಿಗೆ ಕುಂಬಳಕಾಯಿಯನ್ನು ಕಾಶೀನಾಥ ಕೊಟ್ಟದ್ದರ ಪರಿಣಾಮವಾಗಿ ಲಚ್ಚಿಯ ಶೋಷಣೆಯಾಗುತ್ತಿದೆ. ಇಲ್ಲಿ ಹೆಣ್ಣು ಹಾಗೂ ಬಡತನದ ಸಮಸ್ಯೆ ಜೊತೆಯಲ್ಲಿಯೇ ಇರುವುದನ್ನು ಕಾಣಬಹುದು. "ಗೇಣ ಹೊಟ್ಟಿ ಸಲ್ಯಾಕ ಕಳ್ಳತನ ಮಾಡಾದು ಬಂತಲ್ಲೋ ಕಾಸೀ...ನನ್ ಮನಸ ಇದಕ್ ಬ್ಯಾಡಂತಾದೋ...."[7] ಎಂದು ಹೇಳಿ ಮನಸ್ಸಿಲ್ಲದ ಮನಸ್ಸಿನಿಂದ ಕುಂಬಳಕಾಯಿ ತೆಗೆದುಕೊಂಡೂ ಹೋಗುತ್ತಿರುವಂತಹ ಲಚ್ಚಿಯ ಎದುರಿಗೆ ಬಂದು ಹೊಲಸು ನಗೆಯನ್ನು ಬೀರಿ ಪೋಲಿಸರಿಗೆ ಹಿಡಿದುಕೊಡುವ ಮೂಲಕ ಕುಲಕರ್ಣಿ ಹಲವಾರು ಶೋಷಣೆಗಳಿಗೆ ಗುರಿಪಡುವಂತೆ ಮಾಡುತ್ತಾನೆ. ಸ್ತ್ರೀನಿಕೇತನಕ್ಕೆ ಹೋದಂತಹ ಲಚ್ಚಿ ಅಲ್ಲಿಯು ಹೆಣ್ಣಿನಿಂದಲೇ ಶೋಷಣೆಗೆ ಒಳಗಾಗುತ್ತಾಳೆ. ಶೋಷಣೆ ಎಂಬುದು ಬರಿಯ ಹೆಣ್ಣಿಗೆ ಮಾತ್ರವೇ ಇದ್ದಿದ್ದರೆ ಗಂಡಸರೆಲ್ಲರೂ ಸುಖವಾಗಿರಬಹುದಾಗಿತ್ತು. ಆದರೆ ಶೋಷಣೆಗೆ ಗಂಡು--ಹೆಣ್ಣೆಂಬ ಭೇದವಿರದೇ ಶೋಷಣೆಯಿಂದಲೇ ಗುಲಾಮಗಿರಿಯಲ್ಲಿ ಬಳಲಿದ ಪುರುಷ ವರ್ಗವೂ ಇದೆ. ಉದಾಹರಣೆಗೆ ಸ್ತ್ರೀನಿಕೇತನದ ಕಾವಲುಗಾರನ ಪಾತ್ರ ಸಾಕ್ಷಿಯಾಗಿದೆ. ಇದಷ್ಟೆ ನೋವು ಈಕೆ ಸಾಲದೆಂದು ಸ್ತ್ರೀ ನಿಕೇತನದಿಂದ ಬಸ್ಸೆಣ್ಣಿಗೆ ಮಾರಾಟವು ಆಗುತ್ತಾಳೆ ಮನೆಯಿಂದ ದೂರ ಹಾಕಿದಂತಹ ಸಂದರ್ಭದಲ್ಲಿ ಆತ್ಮಹತ್ಯೆಗೆ ಗುರಿಯಾಗುತ್ತಾಳೆ. ಇದರಿಂದ ಕೋರ್ಟಿನ ಕಟಕಟೆಯಲ್ಲಿ ವಕೀಲ ಕೇಳಿದಂತಹ ಪ್ರಶ್ನೆಗಳಿಗೆ ಆಕೆಯ ರೋಧನ ನಗು ಅಳುವೆ ಪ್ರತಿಭಟನೆಯಾಗಿದೆ. ಶೋಷಣೆಯನ್ನು ಅನುಭವಿಸುತ್ತಲೇ ಸಾಯುವುದು ಪ್ರತಿಭಟನೆಯೇ? ಇಲ್ಲಿ ಮೇಲ್ನೋಟಕ್ಕೆ ಜಮೀನ್ದಾರಿ ಶೋಷಣೆಯೇ ಪ್ರಬಲವಾಗಿ ಕಂಡುಬಂದರೂ, ಅದಕ್ಕಿಂತಲೂ ಹೆಚ್ಚು ಲಿಂಗಾಧಾರಿತವಾದದ್ದಾಗಿದ್ದು ಇದು ಹೆಣ್ಣನ್ನು ಮತ್ತಷ್ಟು ಆಳವಾದ ಶೋಷಣೆಗೆ ತಳ್ಳುತ್ತದೆ ಎಂಬುದನ್ನು ಮರೆಯುವಂತಿಲ್ಲ. ಕೌಟುಂಬಿಕ ಚೌಕಟ್ಟನ್ನು ಮೀರಿ ತನ್ನ ಜೀವನವನ್ನು ನಡೆಸಿಕೊಳ್ಳುವಂತಹ ಶಕ್ತಿ ಇದೆ ಎಂಬಂತಹ ಆತ್ಮ ವಿಶ್ವಾಸವಿದ್ದರೂ ಅದನ್ನು ಕುಗ್ಗಿಸುವಂತಹ ನಿಯಮಗಳು ಮತ್ತು ಪುರುಷ ಪ್ರಧಾನತೆ ಇವರ ಕಾದಂಬರಿಗಳಲ್ಲಿ ವ್ಯಕ್ತವಾಗಿದೆ.

ಈ ಕಾದಂಬರಿಯಲ್ಲಿಯೂ ವರ್ಗ ಜಾತಿ, ಲಿಂಗಗಳೇ ಶೋಷಣೆಯ ಪ್ರಧಾನ ಅಧಿಕಾರ ಕೇಂದ್ರಗಳಾಗಿವೆ. ಇದನ್ನು ತಾಯವ್ವ, ಮೈನಾಬಾಯಿ, ತಾಳಿ ಮತ್ತು ಈರಪ್ಪಗಾಸೆಪ್ಪನ ಹೆಂಡತಿಯ ಪಾತ್ರಗಳ ನಿದರ್ಶನದಿಂದ ಗುರುತಿಸಬಹುದಾಗಿದೆ.

ಹೆಣ್ಣೆಂದರೇ ದೆವ್ವ ಬೆಳೆಯೋ ಹಾಗೇ ಈ ಸಮಾಜದಲ್ಲಿ ಆಕೆ ಒಂದು ವಸ್ತುವಾಗಿಯೇ ಇದ್ದಾಳೆ ಎಂಬುದು. "ನಂ ತಾಯವ್ವಗ ತಂದು ಕುಡ್ತಿನಂತ ಆಕಿ ಎಂದಿದ್ದರನೂ ನಿಮ್ಮ ಸೊಸೀನೇ..."[8] ತಾಯವ್ವಳಿಗೆ ಚೆಲುವಿಕೆಯೇ ಶೋಷಣೆಯಾಗುತ್ತಿದೆ. ತಾಯವ್ವನನ್ನು ಈಸೂರ ಮತ್ತು ಗೋಳಪ್ಪ ಜೋಗಿಣಿಯರ ಹತ್ತಿರ ಇದ್ದರೂ ಆಕೆಯ ಚೆಲುವಿಕೆಯನ್ನು ನೋಡಿಯೇ ಮದುವೆ ಮಾಡಿಕೊಳ್ಳುತ್ತಾರೆ. ಮಕ್ಕಳಾಗದಿದ್ದ ಒಂದೇ ಕಾರಣಕ್ಕೆ ಈಕೆಗೆ ಸೋಡಾ ಚೀಟಿಯನ್ನು ಕೊಡುವುದರ ಮೂಲಕ ಗೋಳಪ್ಪನಿಗೆ ಉಡಿಕೆ ಮಾಡಲಾಗುತ್ತದೆ. ಆತನೂ ಈಕೆಯ ಚೆಲುವಿಕೆಯಿಂದಲೇ ಒಪ್ಪಿಕೊಳ್ಳುತ್ತಾನೆ. "ಪೋರಿ ಏನ ಕೇಳ್ತೀರಿ ಗುಣವಂತಿ ಅಂದ್ರ ಗುಣವಂತಿ ನೀವು ಆಕಿ ತೆಲಮ್ಯಾಲ ಎತ್ತಿ ಬಂದು ಕಲ್ಲಾ ಬಂಡಿ ಹಾಕದರನೂ ಕುಯ್ ಕುಯ್ ಅನಕ್ಕಿ ಅಲ್ಲ ಮಗಳು."[9] ಇಲ್ಲಿ ಶೋಷಣೆಗೆ ಒಳಗಾಗುವ ಲಿಂಗ ವರ್ಗಗಳೇ ತಾಳ್ಮೆಯ ಬದುಕೆಂಬ ವೈಭವೀಕರಣವಾಗಿದೆ. ಇದು ಹೆಣ್ಣು ಸದಾ ತನಗೆ ಅಧೀನಳಾಗಿಯೇ ಉಳಿಯಬೇಕೆಂಬ ಪುರುಷ ಚಿಂತನೆ ಹಾಕುವ ಒತ್ತಾಯವೂ ಆಗಿದೆ.

ಗೋಳಪ್ಪನಿಂದಲೂ ಆಕೆಗೆ ಶೋಷಣೆ ಕಡಿಮೆಯಾಗುವುದಿಲ್ಲ. ತನ್ನೆದುರಿಗೆ ತನ್ನ ಗಂಡ ಬೇರೊಂದು ಹೆಣ್ಣನ್ನು ಕರೆದು ತಂದನು. ಗಂಡನ ಈ ನಾಚಿಕೆಗೇಡಿತನಕ್ಕೆ ಅವಳಿಗೆ ಹೇಸಿಗೆಯಾಯಿತು. ಥೂ ಎಂದುಗುಳಿ, ಆ ಹೆಂಗಸಿನ ಕೂದಲೆಳೆದು ಧಪಧಪನೆ ಬಡಿದು ಹೊರನೂಕಬೇಕೆನಿಸಿತು. ಅತ್ತೆ ಮಾವಂದಿರನ್ನು ಎಬ್ಬಿಸಿ ಅಂಗಳದಲ್ಲಿ ನಿಂತು ಒದರಾಡ ಬೇಕೆನಿಸಿತು. ಗೋಳಪ್ಪನ ಮುಖಕ್ಕೆ ಖ್ಯಾಕರಿಸಿ ಉಗುಳಿ ದೂರ ಓಡಬೇಕೆನಿಸಿತು. ಮತ್ತೆ ಏನೇನೋ ಅನಿಸಿ ಮುಖ ಕಠಿಣವಾಗುತ್ತಿರುವಾಗಲೇ ಗಂಡನ ಕರ್ಕಶ ದನಿ ಹರಿದು ಬಂದಿತು. ತಾನು ಶೋಷಿತಳಾದರೂ ಸಹ ಆಕೆಯ ಮನಸ್ಸಿನಲ್ಲಿ ಪ್ರತಿರೋಧದ ಧ್ವನಿಯಿದೆ. ಗಂಡನಿಂದ ಮಾತ್ರವೇ ಶೋಷಣೆಯಾಗುತ್ತಿಲ್ಲ. ಪುರುಷ ಪ್ರಧಾನ ಮನಸ್ಸಿನ ಅತ್ತೆಯು ಶೋಷಿತಳಾಗುತ್ತಾಳೆ. ಮುದುಕಿಯ ಮಾತಿಗೆ ಆಕೆಯ ಉತ್ತರವಾದರೂ ಸಿಟ್ಟು, ತಿರಸ್ಕಾರ, ದುಃಖಗಳೇ ಆಗಿವೆ. ನೀರು ಕಾಯಿಸು ಆಕೆಗೆ ಎಂದಾಗ 'ನಾ ಕಾಸಂಗಿಲ್ಲ ಆ ಹಲ್ ಕಟ್ ರಂಡೀಗಿ ನಾಯಾಕ್ ನೀರಕಾಸಿ ಕುಡ್ಲೀ' ಎಂದು ಸಿಟ್ಟಿನಿಂದ ಅಬ್ಬರಿಸುವಿಕೆಯೇ ಅವಳ ಪ್ರತಿಭಟನೆಯಾಗಿದೆ.

ತಾನು ಮಾಡಿದ ಹೆಣ್ಣಿನ ಮೇಲಿನ ದೌರ್ಜನ್ಯ ಶೋಷಣೆಯನ್ನು ತಾನೇ ಧೈರ್ಯದಿಂದ ಹೇಳುವ ಗೋಳಪ್ಪನ ಮಾತುಗಳಿಂದಲೇ ಕೇಳಬಹುದು. "ಹಿಂತಾದ್ದು ಮಾಡಲಾರ್ದ ಮದಲಿನಕ್ಕಿ ಓಡಿಹ್ವಾದಳು. ಎರಡನೆಯಕ್ಕಿಗಿ ನಾನೇ ಕುತಗಿ ಒತ್ತಿ ಭಾಂಯಾಗ ಬಿಸಾಟಿ ಬಂದು ಸತ್ತಳಂತ ಸುದ್ದಿ ಹುಟ್ಟಿಸಿದ್ದ. ಈಗ ನೀ ಹಿಂಗೇ ಮಂಡಾಟಾ ಸುರು ಮಾಡ್ದಿ. ಅಂದ್ರ, ನಿನ್ ಹೆಣಾ ಸಿಗಲಾರ್ದಂಗ ಮಾಡಿ ಬಿಡ್ಲೀನಿ. ತಿಳಿತೇನು? ಚಾಕೂ ಚೂರಿ, ಕಿಸ್ಯಾ ಕತ್ತರಸಾದು, ಖೂನ್ ಮಾದಾದು ಎಲ್ಲಾ ಇದ್ಯಾ ನನಗೆ ಒಂಬೈ ಕಲ್ಸಿ ಕೊಟ್ಟದ. ನಿಮ್ಮಪ್ಪ ನನ್ ಮುಂದ ಬಂದು ಕಿಸೀಲಿ ತೋರಸ್ತಿನೆಂತ...."[10] ತಾಯವ್ವ ತಾಯಿ ಆದಾಗ ಆಕೆಯ ಮೇಲಿನ ಶೋಷಣೆ ಸ್ವಲ್ಪವಾದರೂ ಕಡಿಮೆಯಾಗಲಿಲ್ಲ. ಶೋಷಣೆಯ ಆಳಕ್ಕೆ ಮತ್ತೂ ನೂಕಲ್ಪಟ್ಟಿತ್ತು. ಹೆಣ್ಣಿಗೆ ನೋವು ಹುಟ್ಟೀನಿಂದಲೇ ಬಂದದ್ದು ಇದೇ ಆಕೆಯ ಸಮಾಧಾನವಾಗಿದೆ. "ಅಳಬ್ಯಾಡ ಮಗಾ ತುಟಿ ಕಚ್ಚಿಬ್ಯಾನಿ ತಿನ್ಬೇಕವ್ವಾ. ಹೆಣ್ಣಿನ ಜನ್ಮಕ ಬ್ಯಾನಿ ತಿನಾದು ಬಿಡಿಸಲಾರ್ದ ಬೆಸಗಿ ಅದಾ ಮಗಳೇ..."[11] ಹಾಗೂ ತಾಯವ್ವ ಸತ್ತಾಗ ಆಕೆ ಅನುಭವಿಸಿದಂತಹ ನೋವು, ಪುರುಷ ಪ್ರಧಾನತೆ ಹೆಣ್ಣಿನ ಮೇಲೆ ನಡೆಸುವ ಶೋಷಣೆಗಳೆಲ್ಲವೂ ತಾಳಿಯ ರೋಧನದಲ್ಲಿದೆ.

ತಾಯವ್ವನದು ಈ ಕಥೆಯಾದರೆ ಆಕೆಯ ಮಗಳು ತಾಳಿಯದು ಮತ್ತೊಂದು ಹಾರುವರ ಮೈನಾ ಬಾಯಿಯ ಮನೆಯಲ್ಲಿ ಕೆಲಸ ಮಾಡಿಕೊಂಡು ಅಲ್ಲಿನ ಪುರಾಣ ಕೇಳಿ ಹಾಸ್ಯವಾಗಿ ನಗುತ್ತಿದ್ದದನ್ನು ಕಂಡು ಬ್ರಾಹ್ಮಣರು ಹೇಳುವ ಮಾತಾದರೂ ಯಾವುದು? "ಯಾವುದು ಅದು ಶೂದ್ರ ಮುಂಡೇದು ಅದಕ್ಯಾಕ ಇಲ್ಲಿ ಬರೋದಕ್ಕ ಬಿಟ್ರಿ? ಕಳನ್ರಿ ಹೊರಗೆ ಶನಿ ಶನಿ ಮುಂಡೇದು ಶೂದ್ರದ್ದಕ್ಕ ಶಾಸ್ತ್ರ ಹ್ಯಾಂಗ ತಿಳೀಬೇಕು? ಹೊರಗ ಹಾಕ್ರಿ ಅದಕ್ಕ....."[12] ಜಾತಿಯಿಂದಲೇ ಮೇಲ್ಜಾತಿಯವರ ಶೋಷಣೆಗೆ ಒಳಗಾಗುತ್ತಿದ್ದಾಳೆ. ಹಾಗೂ ಅಧೀನವರ್ಗದ ಸ್ತ್ರೀ ತನಗೆ ಯಾವುದು ಬೇಡ ಎಂಬುದನ್ನು ಈ ಸಮಾಜ ಆಕೆಯಲ್ಲಿ ತುಂಬಿದೆ. ಪುರುಷ ಪ್ರಧಾನ ಮೌಲ್ಯಗಳಾದ ತಂದೆ, ಗಂಡ, ಮಗನ ಆಶ್ರಯದಲ್ಲಿರಬೇಕು. ಆಕೆಗೆ ಪುರುಷನನ್ನು ಬಿಟ್ಟು ಸ್ವತಂತ್ರ ಜೀವನವಿಲ್ಲ ಎಂಬ ಪುರಾಣ ಕೇಳುತ್ತಲೇ ಬೆಳೆದ ತಾಳಿ ಆ ಪುರಾಣವನ್ನೇ ವಿರೋಧಿಸುವ ಹಂತಕ್ಕೆ ಹೋಗುವುದಾದರೂ ಯಾವಾಗ? ಆಕೆಯ ಜೀವನದಲ್ಲಿ ಅದೆಲ್ಲಾ ಸುಳ್ಳಾದಾಗ. ಹೊಲದಲ್ಲಿ ಕೂಲಿ ನಾಲಿ ಮಾಡುತ್ತಿದ್ದ ತಾಳಿಯ ಹತ್ತಿರ ಗೋಳಪ್ಪ ಬರುವುದು ಆತನಿಗೆ ಸಹಾಯ ಬೇಕಾದಾಗಲೇ ಅಲ್ಲದೇ ಎಲ್ಲಿಂದಲೋ ಬಂದಂತಹ ಕಾಡ್ಯಾನಿಗೆ ತನ್ನ ಮಗಳನ್ನು ಹೇಳದೆ ಕೇಳದೆ ಸಾವಿರ ರೂಪಾಯಿಗಳಿಗೆ ಮದುವೆಯ ಹೆಸರಿನಲ್ಲಿ ಮಾರಾಟವೂ ಆಗುತ್ತದೆ. ಕತ್ತಲೂರಿನಲ್ಲಿ ಗೋಳಪ್ಪನ ಮಗಳಾಗಿ ತನ್ನ ಆಯುಷ್ಯದ ಕಾಲು ಭಾಗವನ್ನು ಕಳೆದಿದ್ದ ತಾಳಿ ಇಲ್ಲಿ,

ಬೊಂಬಾಯಿಯ ಕೆಳಸ್ತರದ ಜನರ ನಡುವೆ ಕಾಡ್ಯಾನ ಹೆಂಡತಿಯಾಗಿ ಇನ್ನುಳಿದ ಆಯುಷ್ಯವನ್ನು ಬದುಕಲು ಪ್ರಾರಂಭಿಸಿದಳು, ಅದೂ ಎಂತಹ ಬದುಕು? ಕಳವು, ಕಿಸೆ ಕತ್ತರಿಸುವಿಕೆ, ಚಾಕು, ಚೂರಿಗಳ ಆಟ, ಗುಂಡಾಗಿರಿ, ತಲೆಹಿಡುಕತನ, ಹೆಂಗಸರ ಮಾರಾಟ, ಅಕ್ರಮವಾಗಿ ಅಫೀಮು, ಗಾಂಜಾ ಸಾಗಾಣಿಕೆ ಮೊದಲಾದ ದಂಧೆಗಳ ನಡುವೆಯೇ ಅದೂ ಅಲ್ಲದೇ ಮದುವೆಯ ಹೆಸರೇಳಿ ಹೆಣ್ಣುಗಳನ್ನು ಅರಬ್ ದೇಶಕ್ಕೆ ಮಾರಾಟ ಮಾಡುವ ಧಂಧೆಯನ್ನು ನಡೆಸುತ್ತಿರುವಂತಹ ಕಾಡ್ಯಾನ ಹೆಂಡತಿಯಾಗಿಯೇ? "ಈ ದುನಿಯಾ ಏಟರೇ ಕೆಟ್ಟದದಾಖೋಡಿ, ಒಂಟೀ ಹೆಂಗ್ಸು ಮರ್ವಾದಿಲಿಂದ ಬದುಕಬೇಕು ಅಂದರನೂ ಬದುಕಲಿಕ್ಕೆ ಬಿಡಂಗಿಲ್ಲ ಇದು. ಈ ಗಂಡಸರ ಸೋಬ್ತಿನೇ ಬಿಲ್ ಕುಲ್ ಬ್ಯಾಡ್ರಪ್ಪೋ ಸಿವನೇ ಅಂತ ನನ್ನಷ್ಟಕ್ಕೆ ನಾ ಸುಮ್ಮಕ್ಕಿದ್ದರ ಈ ಗಂಡಸರ ನನಗ ಬಾಳೋದಕ್ಕೆ ಬಿಡಂಗಿಲ್ಲಗ್ಯಾರಲ್ಲೇ ತಾಯಿ.. ನಾಯೇನೀಗ ಖಾಲಿ ಹೆಂಗಸನೂ ಅಲ್ಲಿ. ಬಸರ ಹೆಣ್ಣು ಮಗಳು. ನನ್ನ ಹೊಟ್ಟಿ ನೋಡೆರೆ ಜನ ದೂರ ಸರೆಂಗಿಲ್ಲಾ ಗ್ಯಾರ. ಗಂಡಿಲ್ಲದ ಹೆಣ್ಣಂದ್ರ ಬಜಾರದಾಗಿನ ಪುಂಡಿಪಲ್ಯ ಅಂತ ತಿಳ್ಕೋಂಡಾರ. ಎಷ್ಟಂದ್ರ ಅಷ್ಟು. ಯಾರಂದ್ರೆ ಅವ್ರು ರೊಕ್ಕಾ ರುಪೈ ಕೊಟ್ಟು ಹರಕ್ಕೊಂಡು ತಿಂದ್ರಾಯ್ತು ಅಂತ ಮಾಡ್ಯಾರ ನನ್ ಗಂಡಂತ ಅನಸ್ಗೊಂಡವ ನನಗ ಆಸರಿ ಆಗಿ ನಿಂದಿರಲಾರ್ದೆ ಬಿಟ್ಟು ಓಡಿ ಹ್ವಾದ, ಗಂಡನ ಆಸರಿ ಅಂದ್ರ ಗಟ್ಟಿ ಆಸರಿ ಅಂತ ನಾ ತಿಳ್ಕೊಂಡಿದ್ದು ಸುಳ್ಳಾಯ್ತು. ಒಟ್ಟನ್ಯಾಗ ನನ್ ಹಣೇ ಬರದಾಗ ಆಸೆಟವಿ ರಂಡೀ ಬರೇ ದುಕ್ಕ, ಅಳುವೇ ಬರದಾಳ ಕಾಣಸ್ತದೆ. ಹೆಣ್ಣ ಅಂದ್ರ ಬರೀ ಸಂಕಟ ಪಡಲಿಕ್ಕೇ ಈ ಗಂಡಸರ ಕೈಯಾಗಿ ಬಿಕರಿ ಆಗಲಿಕ್ಕೇ, ಅವರು ಕರೆದಾಗೆಲ್ಲಾ ಅವರ ಹಾಸಿಗಿ ಗರಂ ಮಾಡಲಿಕ್ಕೇ ಲಾಯಕ್ಕು ಅಂತ ತಿಳ್ಕೊಂಡಾರ ಕಾಣಸ್ತದ..."[13] ಎಂಬ ತಾಳಿಯ ಮಾತು ಶೋಷಣೆಗೊಳಗಾಗಿಯೇ ತಾನು ಶೋಷಿತಳು ಎಂಬ ಮನವರಿಕೆ ಆಗಿರುವುದರಿಂದಲೇ ಪ್ರತಿರೋಧವೆಂದು ಹೇಳಬಹುದು.

ತಂದೆ, ಗಂಡನಿಂದ ಶೋಷಿತಳಾದ ತಾಳಿ ತನ್ನ ಮಗನಿಂದಲೂ ಶೋಷಣೆಯನ್ನು ಅನುಭವಿಸುತ್ತಾಳೆ. ಕೆಳಗಿನ ಜಾತಿಯವಳೆಂಬ ಕಾರಣಕ್ಕಾಗಿ ಸ್ಕೂಲ್ ಮೇಷ್ಟ್ರು ಹೇಳುವ ಮಾತುಗಳಿಗೆ "ಏ ಮಾಸ್ತರಾ ಬಾಯಿ ಬಿಗಿ ಹಿಡ್ದು ಮಾತಾಡು ತಿಳೀತೇನು. ನನಗೇನು ಗಂಡ ಇದ್ದಿದ್ದಿಲೇನು? ಭೆಳ್ಳಗಿದ್ರ ಹಾರ್‍ರ ಅಂತ, ಬೆಳ್ಳಗಿರಾದು ಬರೇ ನಿಮ್ ಜಾತಿ ಗುತ್ತಾ ಏನು? ಮಾಸ್ತರಾ ನಾ ಬಂಬೈದಾಗ ಇದ್ದು ಬಂದಕ್ಕಿ ತಿಳಿತೇನು. ಹೀಗೆಲ್ಲಾ ಅಡ್ಡಾದಿಡ್ಡಾ ಮಾತಾಡ್ದಿ ಅಂದ್ರ ಬಾಯಾಗಿನ ಹಲ್ಲ ಕಿತ್ತಿ ಕೈಯಾಗ ಕುಡ್ತೀನಿ ತಿಳೀತಿಲ್ಲೋ..."[14] ಎಂಬುದು ಪ್ರತಿರೋಧದ ಮಾತಾಗಿದೆ. ಇಲ್ಲಿ ಶೋಷಣೆ ಎಂಬುದು ಒಂದೇ ರೀತಿಯಾಗಿಲ್ಲ. ಹಲವಾರು ಮುಖಗಳನ್ನು ಹೊಂದಿರುವ ಶೋಷಕರು ಇದ್ದಾರೆ. ಆದರೆ ಶೋಷಿತರು ಮಾತ್ರ ಒಬ್ಬರೇ. ಈ ಮಾತು

ಹೆಂಗಸರ ಶೋಷಣೆಯನ್ನು ಸಂಪೂರ್ಣವಾಗಿ ಅರಿಯಲಾರರು ಏಕೆಂದರೆ ಅವರು ಗಂಡಸರು ಇರುವುದೇ ಶೋಷಣೆ ಮಾಡುವುದಕ್ಕೆ ತಾನೇ ಎಂಬುದಕ್ಕೆ ನಿದರ್ಶನವಾಗಿದೆ.

ಮಗ ಸೊಸೆಯಿಂದಲೂ ಶೋಷಣೆಗೊಳಗಾದ ತಾಳಿ ಕೇಳಿಕೊಳ್ಳುವುದು ಹೀಗೆ "ಹೂಂ ನನ್ನಂಥವ್ರೀಗಿ ದೇವರು ಬಕ್ಕಳ ಆಯಸ್ಸು ಕುಡಬಾರ್ದು. ಈ ಬೆಳ್ಯಾಗ ಬೆಳಸಿ ದೊಡ್ಡಾವ ಮಾಡೋ ತನಕಾ ನಾ ಪಟ್ಟ ತರಾಸ ಏಟು ಅಂಬಾದು ಅವನಿಗಿ ಗೊತ್ತಿಲ್ಲ. ನಿನ್ನ ಮನ್ನ ಬಂದ ರುಕ್ಕಿ... ಅರೆಗರೆ ಯಾಕ ಕಾಳಜಿ ಬಗ್ತದ ನನ್ ಮ್ಯಾಲ ಬೆಳ್ಳ್ಯಾ ಏಟಾದರೂ ಗಂಡಸ ಮಗ, ಗಂಡಸ ಮಕ್ಕಳಿಗಿ ತಾಯಿ-ತಂದಿ ಮ್ಯಾಲ ಕಕ್ಕಲಾತಿ ಪಿರೀತಿ ಕಮ್ಮೀನೇ ಇರ್ತಾದಂತ ಕಾಣಸ್ತದ. ಬೆಳ್ಳ್ಯಾನ ಬದಲಾಗಿ ನನಗೊಂದು ಹೆಣ್ಣುಮಗಳು ಇದ್ದಳಂದ್ರ ಆ ಮಾತೇ ಬ್ಯಾರೆ ಇರ್ತಿತ್ತು."[15] ಗಂಡಿಗಿಂತ ಹೆಣ್ಣುಮಕ್ಕಳೇ ಆಸರೆಯಾಗಿ ನೋಡಿಕೊಳ್ಳುತ್ತಿದ್ದಳು ಎಂದು ತಾಳವ್ವ ಹೇಳುವುದನ್ನು ಸವಿತಾ ನಾಗಭೂಷಣರ ತಂಗಿ ಹುಟ್ಟಿದಳು ಕವನದಲ್ಲಿಯೂ ಕಾಣಬಹುದು. ಹೆಣ್ಣಿಗೆ ಯಾರ ಆಸರೆಯೂ ಸಿಗದೆ ನೋವಿನಲ್ಲಿರುವಾಗ ಹೆಣ್ಣಿಗೇ ಹೆಣ್ಣೇ ಆಸರೆಯಾಗಿ ನಿಲ್ಲಬೇಕಾದಂತಹ ನಿಲುವು ತಾಳಿಯ ವೈಚಾರಿಕತೆಯಲ್ಲಿದೆ.

ತಾಳಿಯನ್ನು ಬಿಟ್ಟು ಮಗ ದೂರ ಹೋದಾಗ ಆಕೆ ಹೇಳುವುದು ಹೀಗೆ "ನನಗೊಬ್ಬಕ್ಕಿಗೇ ಬಿಟ್ಟು ಹ್ವಾದೇನೋ ಮಗನೇ.. ಹೋಗಿ ಮುಂದೆ ಒಂದು ಮಾತ ತಿಳಿಸಿ ಹೋಗಲಿಲ್ಲಲ್ಲೋ ಮಗನೇ..... ಈ ಮುದಿ ತಾಯಿ ನಿನಗ ಬ್ಯಾಡದಳೇನೋ ಮಗನೇ ನೀ ಎಲ್ಲಿ ಹ್ವಾದೋ ನನ್ ಕಂದಾ"[16] ಎಂದು ರೋಧಿಸುವ ತಾಳಿಗೆ ಎದುರಾಗುವ ಪ್ರಶ್ನೆಗಳು ತಂದೆ...ಗಂಡ....ಮಗ..ಬಾಲ್ಯ,, ಹರೆಯ.. ಮುಪ್ಪುಗಳೇ ಆಗಿವೆ. 'ಹೆಣ್ಣು ಸ್ವತಂತ್ರಳಾಗಿರಬಾರದು. ಅವಳಿಗೆ ಹೇಗಿದ್ದರೂ ಗಂಡೇ ಗತಿ. ಆ ಆಸರೆ ತಪ್ಪಿದರೆ ಅವಳು ಬದುಕಲಾರಳು-ಬದುಕಬಾರದು ಅವಳಿಗೆ ಎಂದಿದ್ದರೂ ಪುರುಷನೇ ಗಟ್ಟಿ ಆಸರೆ' ಎಂಬ ಪುರಾಣದ ಮಾತುಗಳನ್ನು ಕೇಳುತ್ತಾ ಎಯ್ ಸ್ವಾಮಿ, ಹುಚ್ಚಗೊಟ್ಟಿ ಸಾಕು ಮಾಡು ನಿನ್ ಸುಳ್ಳು ಪುರಾಣ ದಗಲ್ ಬಾಜಿ ಮಾತುಗೋಳು, ಎಲ್ಲಿ ಅದಾನೋ ಗಂಡಸಿನ ಗಟ್ಟಿ ಆಸರಿ? ಯಾವನೋ ಅಂವಾ ನಿನ್ ಶಾಸ್ತರ ಪುರಾಣ ಬರದಂವನು? ಇದೆಲ್ಲಾ ಬರೇ ನಿಮ್ಮ ಹಲಕಟ್ ಗಿರಿಯೋ ಹೆಣ್ಣು ಹೆಂಗಸು ಒಬ್ಬಕೀನೇ ಗಟ್ಟ್ಯಾಗಿ ನಿಂತು ಬದುಕಂಗಿಲ್ಲಂತ ಅಂದಿಯಲ್ಲ? ಈಗಾ ನೋಡಿಲ್ಲಿ ಏ ಸ್ವಾಮೀ ನನಗೆ ನೋಡೊ ನನಗ ಯಾರ ಆಸರಿನೂ ಇರಲಿಲ್ಲೋ ಸಣ್ಣಕ್ಕಿ ಇದ್ದಾಗ ಅಪ್ಪ ನನಗೆ ಆಸರಿ ಆಗಿನಿಂದರಲಿಲ್ಲ ಹರ್‍ಯಾಕ ಬಂದಾಗ ಗಂಡ ನನಗ ಗಟ್ಟಿ ಆಸರಿಯಾಗಿ ನಿಂತು ನೋಡ್ಕೋಲಿಲ್ಲ ಈಗ.. ಈಗ ನಾ ಮುದುಕಿಯಾಗಿ ನಿಂತೀನಿ ಬಾಯಾಗಿನ ಹಲ್ಲೆಲ್ಲಾ ಬಿದ್ದಾದ. ತೆಲ್ಯಾಗಿನ ಕೂದಲೆಲ್ಲ ಬೆಳ್ಳಗಾಗ್ಯಾವ.

ಮೈಯಾಗನ ಕಸುಯೆಲ್ಲಾ ಕರಗ್ಯಾದ ಆದರನೂ ಮಗನ ಆಸರಿ ಇಲ್ದೆ ಬದಕಲಿಕತ್ತೇನಿ ನೋಡು. ಹೆಣ್ಣಿಗೊಂದು ನೀತಿ, ಗಂಡಿಗೊಂದು ನೀತಿ ಹಾಕಿ ಪುರಾಣ ಕಟ್ಟಿದವ್ರು ಲಫಂಗರು. ತಮ್ ಬ್ಯಾಳಿಬೇಯಿಸ್ಕೊಳ್ಳೊ ಸಲ್ಯಾಕ ಹೆಣ್ಣ ಹೆಂಗಸಿನ ಮ್ಯಾಲ ಇವೆಲ್ಲಾ ಖೊಟ್ಟಿ ಆಸರಿಗೋಳು ಹೇರಿಟ್ಟಿದ್ದಿರೊ ನೀವು. ಖರೇ ಅಂದ್ರ ಯಾರಿಗಿನೂ ಯಾರೂ ಆಸರೆ ಇಲ್ಲ. ಈಗಾ ನಮ್ ರಟ್ಟಿಗೋಳೇ ನಮಗ ಗಟ್ಟೀ ಆಸರಿ. ನಿಮ್ ಆಸರಿಗಿ ಬೆಂಕಿ ಹಾಕಲಿ ಹೆಣ್ಣು ಬಳ್ಳಿ ಅಂತ, ಗಂಡ ಗಿಡಾ ಅಂತ ಹುಂ ಖಬರಗೇಡಿ ನಮ್ಮಂತಾ ಹೆಣ್ಣ ಮಕ್ಕಳಿಗೆ ಹಾಯಾಗಿ ಬದುಕಲಿಕ್ಕ ಬಿಡಲಾರದ್ದಂತಾ ನಿಮ್ಮಗೊಳ್ಳ ಪುರಾಣಕ್ಕೆ ಲಕ್ವಾ ಹೊಡೀಲಿ".[17] ಎಂದು ಅಬ್ಬರಿಸಿ ತಾಳಿ ದಮ್ಮು ಬಿಡುತ್ತ. ಕೋಲೂರಿಕೊಂಡು ಗಸಗಸನೆ ತನ್ನ ಗುಡಿಸಲ ಕಡೆಗೆ ನಡೆದಳು. ಪುರಾಣಗಳಿಂದಾಗಿ ಶತಮಾನಗಳಿಂದಲೂ ಶೋಷಿತಳಾದ ಹೆಣ್ಣುಗಳೆಲ್ಲರ ಪ್ರತಿನಿಧಿ ತಾಳಿ ಆಗಿದ್ದಾಳೆ ಎನ್ನಬಹುದು.

ಗೀತಾರವರ ಕಾದಂಬರಿಗಳಲ್ಲಿ ಕೆಳವರ್ಗದ ಸ್ತ್ರೀಯರ ಮೇಲೆ ಮೇಲ್ವರ್ಗದ ಸ್ತ್ರೀಯರು ಗಂಡಾಗಿ ತಮ್ಮ ಪ್ರತೀಕಾರವನ್ನು ತೀರಿಸಿಕೊಳ್ಳುವುದು ಬರುವುದಿಲ್ಲ ಏಕೆಂದರೆ ಅಲ್ಪಸ್ವಲ್ಪ ಮೇಲ್ವರ್ಗದ ಸ್ತ್ರೀಯರಿಗೆ ಶೋಷಣೆ ಕಡಿಮೆಯಾದರೂ ತಾನು ಹೆಣ್ಣು ಎಂಬುದನ್ನು ಮರೆತಿಲ್ಲ. ಕೆಳವರ್ಗದ ಹೆಣ್ಣು ಮಾತ್ರವೇ ಶೋಷಣೆಗೊಳಗಾಗಿಲ್ಲ ಮೇಲ್ವರ್ಗದವಳೂ ಶೋಷಿತಳೇ ಆಗಿದ್ದಾಳೆ. ಶೋಷಣೆಗೊಳಗಾಗಿರುವುದರ ಪ್ರಜ್ಞೆಯನ್ನು ಮೈನಾಬಾಯಿಯ ಮಾತಿನಲ್ಲಿ ತಿಳಿಯಬಹುದಾಗಿದೆ. "ಹೆಣ್ಣೀಗಿ ತಂದಿ, ಗಂಡಾ, ಮಗಾ ಎಲ್ಲೋರೂ ಛಂದ ಇದ್ದರೇ ಆಕಿನ ಬಾಳಾ ಹಸನ ಆಗ್ತದ್ರಿ ಯವ್ವಾ ಇಲ್ಲಂದ್ರ ಮೂರಬಟ್ಟೀನೇ ನೋಡ್ರೀ..." ಎಷ್ಟು ಸಂಕಟದಿಂದ ಆ ಮಾತು ಆಡಿದ್ಲು ತಾಯವ್ವ ದೊಡ್ಡ ಜಾತಿ ಮಂದಿ ಹತ್ತಿರ ಬೇಕಾದಷ್ಟು ಸಂಪತ್ತಿರ್ತದ ಹೊಟ್ಟೀಗಿ ಬಟ್ಟೀಗಿ ಕಡಿಮೆ ಬೀಳೋದಿಲ್ಲ. ನಮ್ಮಂದ್ಯಾಗ ಓದಿದವರಿರ್ತಾರ. ಹೇಳಿ ಕೇಳಿ ಬ್ರಾಂಬ್ರು, ಜಗಳಾ ಹೊಡಿ, ಬಡಿ ಅಂತ ಮಾಡೂದಕ್ಕೆ ಗಂಡಸ್ರು ಹೆದರ್ತಾರ ಭಾಳ ಭಾಳ ಅಂದ್ರ ಗಂಡ ಒಂದು ಶೂದ್ರ ಹೆಂಗ್ಸನ ಸೋಬ್ತಿ ಮಾಡಭೌದು. ಹೆಣ್ತಿ ಜಗಳ ಆಡಿದ್ರೆ ನಾಲ್ಕು ದಿನಾಮಾತು ಬಿಡಬೌದು. ಆದರ ಶೂದ್ರ ಗಂಡಂದಿರಂಗ ಹೊಡಿ ಬಡಿ ಮಾಡೊದಿಲ್ಲ. ಮನಿ ಬಿಟ್ಟು, ಹೆಣ್ತಿ ಮಕ್ಕಳಿಗಿ ಬಿಟ್ಟು ಓಡಿ ಹೋಗಿ ಮಾರಿ ತಪ್ಪಿಸೋದೋ ಭಾಳ ಕಮ್ಮಿ ಇಲ್ಲಂತೇ ಹೇಳ್ಬೇಕು. ಆದರೆ ಪಾಪ ಈ ಶೂದ್ರರು, ದಲಿತರು, ಹೊಲಮಾದಿಗ ಹೆಣ್ಣುಗಳ ಗತಿ ದೇವರೇಗತಿ. ನಮ್ಮ ಶಾಸ್ತ್ರಗೋಳದಾಗ ಹೇಳಿದ್ದಾಂಗ ಹೆಣ್ಣು ತಂದಿ, ಗಂಡ, ಮಗನ ನೆರಳಿನಲ್ಲಿಯೇ ಇರ್ಬೇಕು. ಅಂದ್ರ ಅದೂ ನಮ್ಮಂತಾ ದೊಡ್ಡಜಾತಿ, ರೊಕ್ಕಾ ಇರಾಮಂದಿ, ಹೆಣ್ಣ ಗೋಳಿಗಿ ಹ್ಯಾಂಗರೆ ಸಾಧ್ಯಾ ಆದೆತ್ತು."[18] ಈ ಮಾತಿನಲ್ಲಿ ಮೇಲ್ವರ್ಗದ ಹೆಣ್ಣಿಗಿಂತಲೂ ಕೆಳವರ್ಗದ ಹೆಣ್ಣಿಗೆ ಯಾವ ರೀತಿಯ ಶೋಷಣೆ ಇದೆ

ಎಂಬುದು ತಿಳಿಯುತ್ತದಾದರೂ ತಾನೂ ಶೋಷಣೆಯಲ್ಲಿದ್ದೇನೆಂಬ ಪ್ರಜ್ಞೆ ಆಕೆಯಲ್ಲಿದೆ. "ಹಿಂತಾ ಶಾಸ್ತ್ರಗಳೆಲ್ಲ ಬರೆಯೋವಾಗ ಪಂಡಿತರು, ಮನುವಿನಂತಾ ಮಹಾ ರುಸಿಗಳೆಲ್ಲರೂ ಶೂದ್ರ ಹೆಣ್ಣುಗಳ ಬಗ್ಗೆ ಎಳ್ಳಷ್ಟು ಯೋಚನೆಯೇ ಮಾಡಿಲ್ಲ, ಕಾಳಜೀನೇ ತಗ್ಗೊಂಡಿಲ್ಲ, ಮೇಲಾಗಿ ಅವರಿಗಿ ಬರೀ ದೊಡ್ಡ ಜಾತಿ, ಜನಾಂಗದವರ ನೆನಪಿತ್ತೇ ಹೊರತು ಕೂಲಿ ನಾಲಿ ಮಾಡಿ ಹೊಟ್ಟೆ ತುಂಬಸಗೋಳ್ಳೋ ಬಡೂ ಬಗ್ಗರು, ಸೂದ್ರ ಹೆಂಗಸ್ರು, ಮಕ್ಕಳಂದಂತೂ ಖಂಡಿತ ನೆನಪಿರಲಿಕಿಲ್ಲ. ನೆನಪಿತ್ತು ಅಂತಂದ್ರ ಹಿಂತಾ ಅಸಂಬದ್ಧ ಶಾಸ್ತ್ರಗಳನ್ನು ಅವರು ಮಾಡ್ತಿರಲಿಲ್ಲ. ದೊಡ್ಡ ದೊಡ್ಡ ಪುರಾಣ, ಶಾಸ್ತ್ರಗ್ರಂಥಗಳೊಳಗ ಬರ್‍ದು ಬರ್‍ದು ಇಟ್ಟೂ, ಬರದವ್ರು ಸತ್ತು ಸಾವಿರ ವರ್ಷ ಆದರನೂ ಈಗ ಈ ದಿನಗೋಳದಲ್ಲಿಯೂ ಹೆಂಗಸರ ಜಿಂವಾ ತಿನ್ನುತ್ತಿರಲಿಲ್ಲ. ಸಿರಿವಂತ ವರ್ಗದ ಹೆಂಗಸ್ರು ಅಂದ್ರ ಮನಿಬಿಟ್ಟು ಹೊರಗೆ ಹೋಗೋದೇ ಇಲ್ಲ, ತಮ್ಮ ಜೀವನಕ್ಕಾಗಿ ಗಂಡಸರ ಮ್ಯಾಲೇ ಅವಲಂಬಿಸಿರಬೇಕಾಗ್ತದ ಖರೇ. ಆದರ ಈ ಬಡೂ ಬಗ್ಗರು, ಶೂದ್ರ ಹೆಂಗಸರು ದಿನ್ನಾ ಅಡ್ಯಾಗ, ಹೊಲದಾಗ, ಮನ್ಯಾಗ, ಎಲ್ಲಾ ಕಡಿ ರಟ್ಟೆಮುರ್‍ದು ದುಡ್ದು ಹೊಟ್ಟೆ ತುಂಬಸಕೊಳ್ಳತಾರ, ತಮ್ಮ ಜೀವನಕ್ಕೆ ಆ ಹೆಂಗಸ್ರು ಗಂಡಸಿನ ಕಡಿ ಕೈ ಚಾಚಿ, ಅವನ ಮ್ಯಾಲೇ ಕುಂತಿರೂದಿಲ್ಲ. ಅಂಥವರಗಿ ಹೊಟ್ಟಿ ತುಂಬಿಸಿಕೊಳ್ಳೋದರ ಸಲುವಾಗಿಯಂತೂ ಗಂಡಿನ ಆಸರೆ ಬೇಕಾಗಿಲ್ಲೇನೋ ಅಂತ ಅನ್ನಿಸಿ; ಆ ಸಣ್ಣ ಜಾತಿಯ ಶೂದ್ರ ಹೆಂಗಸರಕ್ಕಿಂತಾ ದೊಡ್ಡ ಜಾತಿಯ ತಮ್ಮಂಥ ಹಾರುವವರ ಹೆಂಗಸರೇ ಭಾಳ ಅಸಹಾಯಕರೇನೋ ಈ ಅರಿವು ಮೈನಾಬಾಯಿಗೆ ಬರುತ್ತಿರುವುದಾದರೂ ಯಾಕೆ? ತಾನು ವರ್ಗದಿಂದಲ್ಲದಿದ್ದರೂ ಹೆಣ್ಣಾಗಿಯೇ ಶೋಷಣೆಗೊಳಗಾಗಿದ್ದಾಳೆ ಮೇಲ್ವರ್ಗದ ಹೆಣ್ಣಿಗೂ ಶೋಷಣೆ ತಪ್ಪಿದ್ದಲ್ಲವೆಂದು ಪುರಾಣ, ವರ್ಗ, ಧರ್ಮ, ಲಿಂಗ, ಸಮಾಜವನ್ನು ಪ್ರಶ್ನಿಸುವ ಮನೋಭಾವ ಈಕೆಯದಾಗಿದೆ.

ತನ್ನ ವರ್ಗ ಹಾಗೂ ಗೌಡನಿಂದ ಶೋಷಣೆಗೊಳಗಾಗುತ್ತಿರುವ ಮತ್ತೊಂದು ಪಾತ್ರವೆಂದರೆ ದುರ್ಗಿಯದು ಮತ್ತು ತನ್ನ ವರ್ಗವಾದ ಮೇಲ್ಜಾತಿಯಿಂದಲೇ ಶೋಷಣೆಗೊಳಗಾಗುತ್ತಿರುವ ಈರಾಪಗೆಸಪ್ಪ ಗೌಡನ ಹೆಂಡತಿಯದು. ಬಡತನ ಮತ್ತು ವರ್ಗದಿಂದಲೇ ದುರ್ಗಿ ಗೌಡನಿಗೆ ಶೋಷಣೆಗೊಳಗಾಗುತ್ತಿದ್ದರೆ, ದುರ್ಗಿ ಹಾಗೂ ಗೌಡನ ಸಂಬಂಧ ತಿಳಿದ ಪೋಮ್ಯಾನೂ ಸಹ ಆಕೆಯನ್ನು ಹೊಡೆಯುವುದರ ಮೂಲಕ ಶೋಷಿಸುತ್ತಿದ್ದಾನೆ. ಈ ವಿಚಾರ ತಿಳಿದ ಗೌಡನ ಹೆಂಡತಿಯು ಶೋಷಿತಳೇ ಆಗಿದ್ದಾಳೆ. ಬೆಳ್ಳ್ಯಾನಿಂದ "ಯವ್ವಾ ಮಾತ ಮಾತರ ಘಾತ ಆಯ್ತು ನೋಡ್ರೀ ಗೋಡ್ರು ತ್ವಾಟದಾಗೇ ಹರಾ, ಹೊತ್ತ ಮುಣಗಿ ಕತ್ತಲಾದ ಮ್ಯಾಲಿ ಬ್ಯಾಡರ ದುರ್ಗಿನಿ ಕರ್ಕೊಂಡು ಬಾ ಅಂತ ಅಂದಿದ್ರು ನನಗ.

ನಾ ಆಕಿಗಿ ಕರ್‍ಯಾಕ ಹ್ವಾದಾಗ ಅಕಿ ಗಂಡ ಪೋಮ್ಯಾ ಮನ್ಯಾಗೇ ಇದ್ದನ್ರೀ ಜಲ್ದಿ ನಿನ್ ಹೆಣ್ತೀಗಿ ಕಳ್ಸು, ಗೋಡ್ರು ಕರೀಲಕ್ಹತ್ತಾರ ಅಂತ ಅಂದ್ನಿ ಮತ್ತು "ಅದೇರಿ ಗೋಡ್ರು ದುರ್ಗಿನಿ ಎಳಕೊಂಡು ತ್ವಾಟದ ಭಾವಿ ಪಂಪ್ ಸೆಟ್ ಖೊಲ್ಲ್ಯಾಗ ಹೋಗಿ ಬಾಗಿಲು ಮುಚ್ಚಕೋಳ್ಳಾದು..." ಈ ಮಾತನ್ನು ಕೇಳಿದ ಗೌಡತಿ ಸಿಟ್ಟಿನಿಂದ ಹಲ್ಲು ಕಡಿಯುತ್ತಾ ಹೂಂ ಬೆಳ್ಳ್ಯಾ ನಿನ್ ಗೌಡ ಹಂಗಾರ ತ್ವಾಟದಾಗೇ ಕುರಿತು ನಿಂದು ದುರ್ಗಿದೂ ದಾರಿ ನೋಡ್ತಿರಬೇಕು."[19] ಎಂದು ಹೇಳುವ ಮಾತೇ ಪ್ರತಿರೋಧವಾಗಿದೆ. ಒಟ್ಟಾರೆಯಾಗಿ ವಿವಾಹ ಮತ್ತು ಕುಟುಂಬಗಳು ಸಹ ಹೆಣ್ಣನ್ನು ಪುರುಷಾಧೀನವಾಗಿಯೇ ಉಳಿಸಿಕೊಳ್ಳಲು ಮಾಡಿಕೊಂಡಿರುವ ಸಂಸ್ಥೆಗಳಾಗಿವೆ.

**ಬದುಕು**

ಈ ಕಾದಂಬರಿಯಲ್ಲಿ ಸಾಮಾಜಿಕವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ ಕೆಳವರ್ಗವು ದಾರಿದ್ರ್ಯ, ಮೌಢ್ಯತೆಗಳಿಂದ ಶೋಷಣೆಗೊಳಗಾಗಿದ್ದಾರೆ. ಎಂದು ಅನ್ನಿಸಿದರೂ ಶೋಷಣೆಯ ಆಳದಲ್ಲಿ ಲಿಂಗ ವರ್ಗಗಳೇ ಅಧಿಕಾರ ಕೇಂದ್ರಗಳಾಗಿವೆ. ಮೇಲ್ವರ್ಗದ ಒಂದು ಸಮುದಾಯವನ್ನು ಶೋಷಿತಗೊಳಪಡಿಸಿದರೆ, ಸಮುದಾಯದಲ್ಲಿಯೂ ಶೋಷಣೆಗಳಿಲ್ಲವೇ?

ಮಲ್ಲಪ್ಪ ತನ್ನ ಹೆಂಡತಿಯಾದ ಮಲ್ಲವ್ವನಿದ್ದರೂ ಸಹ ಬೇರೆಯವರ ಜೊತೆಗಿನ ಸಂಬಂಧವಿರುತ್ತದೆ. ಅದನ್ನು ತನ್ನ ಅಪ್ಪನಿಗೆ ಹೇಳಿದಾಗ, ಆಳವನಿಗಿ ಅರವತ್ತಮಂದಿ ಹೆಂಡ್ರಂತೆ ನಾ ಖಂಬೀರ ಗಂಡಸಿದ್ದೀನಿ... ನಮ್ಮಪ್ಪ ಭೋಸಡಿ ಮಗಾ ನನ್ನಂತಾ ಹುಲಿ ಜೋಡಿ ನಿನ್ನಂತಾ ಇಲಿ ಮರೀಗಿ ತಂದು ಗಂಟು ಹಾಕಿ ಹ್ವಾದ"[20] ಎಂದು ಬೈದನು. ಹೆಣ್ಣೆಂದರೆ ದೇಹ, ದೈಹಿಕವಾಗಿಯೇ ಹೆಣ್ಣನ್ನು ಗುರುತಿಸಲಾಗುತ್ತಿದೆ. ಇಷ್ಟೆಲ್ಲಾ ಬೈಯುತ್ತಿದ್ದ ಮಲ್ಲಪ್ಪ ತನಗೆ ಮಕ್ಕಳಾದ ಮೇಲೆ ತಟಸ್ಥನಾದ ಅಂದರೆ ತನ್ನ ತಾಯ್ತನದಿಂದಲೇ ಮಲ್ಲವ್ವ ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳಬೇಕಾಗಿದೆ. ಮಕ್ಕಳಾಗುವುದರಿಂದಲೇ ಆಕೆಯ ಮೇಲೆ ನಡೆಯುತಿದ್ದ ಹಿಂಸೆ ತಪ್ಪುತ್ತದೆ.

ಲಿಂಗರಾಜ ಮತ್ತು ಕಾಶಮ್ಮನ ವಿಚಾರದಲ್ಲಿ ಸಮಾಜ ಹೇಳುವುದಾದರೂ "ನೋಡು ಮಲ್ಲಪ್ಪ ನಿನ್ ಮಗಳು ಕಾಶಮ್ಮ ಮತ್ತೆ ಸಾವ್ಕಾರನ ಮಗ ಲಿಂಗರಾಜಾ ಇಬ್ರೂ ಕೈ ಕೈ ಹಿಡ್ಕೊಂಡು ಹಳ್ಳಿ ಸುತ್ತಾ ಮುತ್ತಿನ ಬನದಾಗ, ಗುಡ್ಡದಾಗ ತಿರಗ್ಯಾಡಲಿಕತ್ತಾ ದಂಬೋಸುದ್ದಿ ಬಂದಾದ ನೋಡ್ದವರೆಲ್ಲಾ ಹೇಳ್ಯಾರ ಲಿಂಗರಾಜಾಗ ಕರ್‍ಸಿ ಕೇಳದ್ರ ಅಂವಾ ನಿನ್ ಮಗಳಿಗೇ ಮದಿ ಮಾಡ್ಕೋತೀನೀ ಅಂತ ಹಟಾ ಹಿಡಿದಾನಂತ! ಈಗ ನೀನೇ ಹೇಳು, ಸಾವ್ಕಾರಗ ಸಿಟ್ಟೂ

ಬರಂಗಿಲ್ಲೇನು? ಲಿಂಗರಾಜಾಯೇನೊ ಗಂಡಸ ಮಗಾ ಗಂಡಸರಿಗೇನೂ ಐಬಿಲ್ಲ ಆದರ ನಿನ್ನ್ ಮಗಳು..."[21] ಮೇಲ್ವರ್ಗದವನಾಗಲಿ ಕೆಳವರ್ಗದವನಾಗಲಿ ಗಂಡು ಗಂಡಸೇ. ಹೆಣ್ಣು ಬರಿಯ ದೇಹ ಮಾತ್ರವೆಂಬ ರೀತಿಯಲ್ಲಿ ಇಲ್ಲಿ ಗುರುತಿಸಲಾಗಿದೆ. ಗಂಡಿನ ಜೊತೆ ಹೆಣ್ಣು ಓಡಾಡಿದರೆ ಅದಕ್ಕೆ ಹಲವಾರು ಪಟ್ಟಗಳು, ಗಂಡು ಹಲವಾರು ಹೆಣ್ಣುಗಳ ಜೊತೆ ಓಡಾಡಿದರೆ ಪ್ರತಿಷ್ಠೆಯ ಸಂಕೇತ ಎಂಬಂತೆ ಈ ಮಾತಿದೆ.

"ನಿನಗೇನೂ ಗೊತ್ತಿಲ್ಲಂತೆಯೇ ನೋಕ್ಕಾಟಗಾ...ಹ್ಯಾಗ ಗೊತ್ತಾಗ್ತದೇ ನಿನಗ? ನಿನ್ ಮಗಳಿಗೆ ಚುಂಚೂರು ಮಾಪುರ ತಾಯಿಗಿ ಜೋಗಣಿ ಬಿಟ್ಟಿದ್ದೇನೋ ಮಲ್ಲ್ಯಾ? ಬಸವಿ ಬಿಟ್ಟಿಯೇನು?" ಎಂಬ ಸಾವ್ಕಾರನ ಮಾತಿಗೆ ಆತ ನೀಡುವ ಉತ್ತರ "ಏನಂದ್ಯೋ ಸೂಳ್ಯಾ ಮಗನೇ ಸಾವ್ಕಾರಾ ನಿನ್ನ ನಾಲಿಗೆ ಬಿಗಿ ಹಿಡ್ದು ಮಾತಾಡು. ನನ್ ಮಗಳ ಹೆಸರಿಗೆ ಬಂದೆಂದ್ರ ನಿನ್ನ ನಾಲಿಗಿ ಸೀಳಿ ಹಾಕ್ತೀನಿ ಎಂದು ಮಲ್ಲಪ್ಪ ಸಿಟ್ಟಿನಿಂದ ಕಣ್ಣು ಕೆಂಪಗೆ ಮಾಡಿಕೊಂಡು ಪ್ರತಿರೋಧವನ್ನು ವ್ಯಕ್ತಪಡಿಸುತ್ತಿದ್ದಾನೆ. ಕಾಶಮ್ಮನ ಮದುವೆ ಆಯಿತೆಂದು ಲಿಂಗರಾಜನಿಗೂ, ಲಿಂಗರಾಜನ ಮದುವೆಯಾಯಿತೆಂದು ಕಾಶಮ್ಮನಿಗೂ ತಿಳಿಸಿ ಮದುವೆಯನ್ನು ಮಾಡುತ್ತಾರೆ. ಕಾಶಮ್ಮ ಮಾರ್ತಾಂಡನೊಂದಿಗೆ ಮೂರು ವರ್ಷಗಳ ಕಾಲ ಜೊತೆಗಿದ್ದು ಮತ್ತೆ ಲಿಂಗರಾಜನ ತೋಟದ ಮನೆಯನ್ನು ಸೇರುತ್ತಾಳೆ. ಇಲ್ಲಿ ಆಕೆಯ ಆರ್ಥಿಕ ಪರಿಸ್ಥಿತಿ ಕಾರಣವಾಗುವುದಿಲ್ಲ. ಆಕೆಯ ಗಂಡ ಮಾರ್ತಾಂಡ ಚೆನ್ನಾಗಿ ನೋಡಿಕೊಂಡರೂ ಸಹ ಆಕೆ ಹೋಗುವುದು ಮಾನಸಿಕ ತುಮುಲದಿಂದಲೇ ಇರುವಂತಹ ಸಾಮಾಜಿಕ ನೀತಿಯನ್ನು ಬಿಟ್ಟುಹೋದಂತ ಕಾಶಿ ಲಿಂಗರಾಜನಿಗೆ ರಂಡೆಯಾಗಿಯೇ ಉಳಿಯುತ್ತಾಳೆಯೆ ಹೊರತು ಹೆಂಡತಿಯಾಗಲ್ಲ. ಏಕೆಂದರೆ ಪುನಃ ಯಥಾವತ್ತಾಗಿ ಹೇಳುವುದಾದರೆ ಆಕೆ ಕಾಟಕರ ಹೀನ ಕುಲದ ವಳಲ್ಲವೇ ಇರುವಂತಹ ಸಾಮಾಜಿಕ ನಿಯಮವನ್ನು ಮೀರಲು ಶೋಷಣೆಯನ್ನು ಅನುಭವಿಸುತ್ತಲೇ ಈಕೆಯ ಪ್ರತಿಭಟನೆಯಾದರೆ, ಈಕೆಯಿಂದಲೂ ಮಾರ್ತಾಂಡ ಶೋಷಿತನಾಗಿಲ್ಲವೇ? ಎಂಬ ಪ್ರಶ್ನೆ ಸಹಜವಾದದ್ದೇ ಆಗಿದೆ.

ಆದರೂ ಇದೆಂತಾ ರಿಣಾನೋಯಣ್ಣಾ ನಾ ಅವಗ ಬ್ಯಾಡಂತ ಎಡಗಾಲಿಂದ ಒದ್ದು ಬಂದು ಈ ಸಾವ್ಕಾರನ ಮನಿ ಸೇರಿದರನೂ ಆ ಹುಚ್ಚಗೊಟ್ಟಿ ಮಾರ್ತಾಂಡ ನನ್ ಮ್ಯಾಲೀ ಜೀಂವಾ ಇಟ್ಕೊಂಡಾನಾದ್ರ ಇದಕ್ಕೇನನ ಬೇಕು. ಯಾ ಜನ್ಮದ ರಿಣ ತೀರ್ಸಲಕತ್ತಾನೋ ಮಾರಾಯಾ... ಎಂದು ಕಾಶಮ್ಮ ಮಾರ್ತಾಂಡನ ಹತ್ತಿರ ಬರುತ್ತಾಳೆ. ಬರಗಾಲದ ಬಾವಿಯಂತಿದ್ದ ಅವನ ಕಣ್ಣುಗಳಲ್ಲಿ ಫಕ್ಕನೆ ಬೆಳಕು ಧಾವಿಸಿ ಬಂದಿತು. ಧನ್ಯತೆಯ ಭಾವ ಅವನ

ಮಾರಿಯ ಮೇಲಾಡಿತು. ಅಳಬ್ಯಾಡ ಕಾಶೀ ಯಾಕಳ್ತಿ ಆಂ? ನಿನಲಿಂದ ಅಗಲಿ ನನಗ ಸಮಾಧನದಿಂದ ಬದುಕಲಿಕ್ಕಿ ಆಗಲಿಲ್ಲ. ಇದರಾಗ ನಾ ಸೋತು ಬಿಟ್ಟೇನಿ ನೋಡು... ನೀ ಅತ್ತರ ನನಗ ಬಾಳ ಸಂಕಟ ಆಗ್ತದೆ ಕಾಶೀ. ಅಳಬ್ಯಾಡ ನಿನ್ನ ನಗು ಮಾರಿ ನೋಡಿ ಹೋಗಲಕ್ಕಾಂತ ನಾ ಬಂದೀನೀ ಕಣ್ಣೀರಲ್ಲೇ ಕಾಶೀ ಎಂಬ ಮಾರ್ತಾಂಡನ ಮಾತಿಗೆ ನನಲಿಂದ ಅಗಲಿ ನೀ ಈನು ಖರಾಬಾಗ್ತಿಂತ ಬರ್ಬಾದಗ್ತೆಂತ ಗೊತ್ತಿದರ ನಾ ನಿನಗ ಬಿಟ್ಟು ಬಿಲ್‌ಕುಲ್ ಬರ್‍ತಿರಲಿಲ್ಲೋ ಮಾರ್ತಾಂಡಿ ನನಗೆ ಮಾಫ ಮಾಡಿಬಿಡು ನಂದು ಬಾಳ ದೊಡ್ಡ ತಪ್ಪಾಯ್ತು. ಇದೇನು ನಿನ್ನ ಹಾಲತ ಮಾಡ್ಕೊಂಡಿದ್ದಿ ಎಂದು ಕಾಶಿ ದುಕ್ಕಿಸಿದಳು. ಸೊಲುಪೊತ್ತು ಇಬ್ಬರೂ ಒಬ್ಬರ ಮಾರಿಯೊಬ್ಬರು ನೋಡುತ್ತ ಮೂಕರಾಗಿ ಕೈಕೈ ಹಿಡ್ಕೊಂಡು ಕುಂತೇಯಿದ್ದರು. ಹೃದಯ ಹೃದಯಗಳು ಸುಖ ದುಃಖ ತೋಡಿಕೊಂಡವು. ಮನಸ್ಸು ಮನಸ್ಸುಗಳು ಮಾತಾಡಿದವು. ನಾಲಿಗೆ ನಾಲಿಗೆಗಳು ಹಲ್ಲುಗಳ ನಡುವೆ ಬಾಯಿ ಮುಚ್ಚಿಕೊಂಡು ಮುದುರಿಕೊಂಡವು. ಆಯ್ತುಕಾಶೀ...ಕಡಿ ಸರ್‍ತಿ ನಿನಗ ನೋಡ್ಬೇಕಂತ ಭಾಳ ಆಸಿಯಿತ್ತು. ಬಂದೀನೀ... ನಿನ್ನ ಬೇಟಿ ಆಯ್ತು, ಈಟು ಸಾಕು ನನಗ ಆ ಭಗವಂತ ನಿನಗ ಕಡೀತನಕಾ ಸುಕದಾದಿಡ್ಲೀ..."[22] ಎಂಬ ಮಾನವೀಯತೆಯ ಮಾತುಗಳಲ್ಲಿದೆ ಹಾಗೂ ಆಕೆಯ ಪಶ್ಚಾತಾಪದ ಮಾತುಗಳೂ ಆಗಿವೆ. ಲಿಂಗರಾಜನ ಹೆಂಡತಿ ನೀಲಮ್ಮನೂ ಕಾಶಮ್ಮನ ವಿಚಾರದಿಂದಾಗಿ ಶೋಷಿತಳೇ ಆಗಿದ್ದಾಳೆ. ಆದರೂ ಸಹ ಹೆಂಡತಿಯಾಗಲಿ ಮಗುವಿನ ತಾಯಿಯಾಗಿಯೇ ತಾಯ್ತನ ಎಂಬುದು ಶೋಷಣೆಯ ಮುಖವಾಡವೇ ಆಗಿದೆ.

ಈ ಜಮಾದಾರ ಮನಿತನದ ಹೆಣ್ಣು ಮಕ್ಕಳು ಹಿಂದಿನಿಂದಲೂ ಬಾಳಿ ಬದುಕಿ ಸತ್ತು ಹೋಗ್ಯಾರ. ಹಿಂತಾ ವಂಸದಾಗ ಈ ಕಾಶೀ ಮೈಯಾಗ ಯಕಾಡಿಂದ ಹಾದರದ ಬೀಜ ಬಿತ್ತೋ ಆ ಭಗವಂತನಿಗೇ ಗೊತ್ತು..."[23] ಮಲ್ಲಪ್ಪ ಹೆಣ್ಣು ಮಾಡಿದರೆ ಕೆಟ್ಟದ್ದು ಮರ್ಯಾದೆ ಹೋಗುವ ಕೆಲಸ ಗಂಡು ಮಾಡಿದರೆ ಅದು ಪ್ರತಿಷ್ಠೆಯ ಸಂಕೇತ. ತನ್ನ ಮಗಳು ಮಾಡಿರುವ ತಪ್ಪಿನ ಬಗ್ಗೆ ಹೇಳುತ್ತಿರುವಂತಹ ಮಲ್ಲಪ್ಪನಿಗೆ ತನ್ನ ತಪ್ಪಿನ ಅರಿವು ಯಾಕಿಲ್ಲ ಎಷ್ಟೇ ಆಗಲಿ ಮಗಳು ಹೆಣ್ಣಲ್ಲವೇ?

ಕಲ್ಯಾಣಿ ಜೈಲಿಗೆ ಹೋದ ಮೇಲೆ ಬೆಳ್ಳಿಯು ಶೋಷಣೆಗಳೊಳಗಾಗಿದ್ದಾಳೆ. ಬೇಲಿಯಿಲ್ಲದ ಹೊಲ ಅಂದ್ರ ಹಾದಿಬೀದಿ ದನಗೋಳೆಲ್ಲ ಮೇಯಲಕ್ಕ ಬರ್ತಾವ ಕೋಡಿ. ಒಂಟಿ ಹೆಂಗಸ ದುಡ್ದು ಬದುಕಗುಡಂಗಿಲ್ಲ ಈ ಮಂದೀ ಒಟ್ಟನ್ಯಾಗ ನಾನೇ ಗಟ್ಟಿಯಾಗಿ ನಿಂದರ್‍ಬೇಕು ಎನ್ನುವಲ್ಲಿ ಗಂಡ ಇಲ್ಲದ ಹೆಣ್ಣನ್ನು ಸಮಾಜ ನಡೆಸಿಕೊಳ್ಳುವ ರೀತಿ ಮತ್ತು ಆಕೆಯ ಛಲ ಮೆಚ್ಚುವಂತದ್ದೆ. ಆದರೆ

ಹೆಣ್ಣು ಹೆಣ್ಣಾಗಿ ನರಳುತ್ತಿದ್ದಾಳೆಯೇ ಹೊರತು ತನಗಿರುವ ಆತ್ಮ ವಿಶ್ವಾಸ ಛಲಗಳಿಂದಲ್ಲ ಇದಕ್ಕೆ ಹಸಿಮಾಂಸ ಹದ್ದುಗಳು ಕಾದಂಬರಿಯ ಲಚ್ಚಿ, ಆಸರೆ ಕಾದಂಬರಿಯ ತಾಳವ್ವನೂ ನಿದರ್ಶನವಾಗಿದ್ದಾಳೆ. ಹೆಣ್ಣಿಗೆ ಶತಮಾನಗಳಿಂದಲೂ ಶೋಷಣೆ ತಪ್ಪಿದ್ದಲ್ಲ ಹೆಣ್ಣಿನ ಜನ್ಮ ಇರುವುದೇ ನೋವನ್ನು ಅನುಭವಿಸಲಿಕ್ಕಾಗಿ ಎಂಬುದ ಈರವ್ವನ ಮಾತುಗಳಲ್ಲಿ ತಿಳಿಯುತ್ತದೆ.

ಬೆಳ್ಳೀ....ನಿನ್ ಗಂಡ ಚವದಾ ವರ್ಸ ಸಜಾ ಬೋಗಸಿ ವಾಪಸ್ಸು ಬರತನಕಾ ನೀ ಇಲ್ಲಿ ಮುದಕ್ಯಾಗಿ ಹೋಗ್ತಿ....ದುಡ್ದೂ ದುಡ್ದೂ ಮೈಯಾಗಿ ತಾಕತ್ತನೂ ಕರಗಿರ್ತಾದ.....ನನ್ ಮಾತುಕೇಳು... ಮತ್ತ ನನಗ ತಪ್ಪ ತಿಳ್ಕೋಬ್ಯಾಡ.... ನೀ ಮನಸ ಮಾಡದ್ರ ನೀ ಹಿಂಗ ದುಡ್ಯಾದು ತಪ್ಪಸ್ತೀನಿ ನಾನು ...ಚೆಲು ಹೆಂಗಸ್ರು ಹಿಂಗ್ ಅಡಿಗಿಡಾ ತಿರಗ್ಯಾಡಿ, ಹೊರಿ ಹೊತಗೊಂಡು ಬರಾದು ನೋಡದರೇ ನನ್ ಕಳ್ಳು ಚುರ್ರಂತಾದ.... ನೀ ಒಪಗೊಂಡ್ರ ನಾ ರಾತ್ರಿ ನಿನ್ ಮನೀಗಿ ಬರ್ತಿನಿಂತ.....ನಿನ್ ಮನಿಗಿ ಹತ್ತೋಟು ಖರ್ಚಾ ಕುಡ್ತೀನಿ. ಇಲ್ಲಿ ದಲಿತ ಹೆಣ್ಣಿನ ಶೋಷಣೆ ಈ ರೀತಿಯಲ್ಲಿ ಮೊದಲಿನಿಂದಲೂ ನಡೆದುಕೊಂಡು ಬಂದಿರುವುದೇ ಆಗಿದೆ. ಈ ಮಾತಿಗೆ " ಯಪ್ಪಗೋಡ.... ನೀ ನೋಡ್ದರ ನಮ್ಮಪ್ಪ ಇದ್ದಂಗಿದ್ದೀ.... ನಿನ್ನಂಥವನ ಬಾಯಿಯಿಂದ ಹಿಂತಾ ಮಾತು ಬರಬಾರ್ದು, ನನ್ನ ವಾರಗಿ ಮಗಳಾಳಲ್ಲ ನಿನಗ .....ತೆಗಿ ಅಕಾಡಿ ಏನು ಮಾಡಂತ ಆಡ್ತಿ..."[24] ಎಂದು ಆತನ ಮಗಳ ಭಾವನೆಯಲ್ಲಿಯೇ ಅವನಿಗೆ ಉತ್ತರ ನೀಡುತ್ತಿದ್ದಾಳೆ.

ಮನಸ್ಸು ಇಷ್ಟೆಲ್ಲ ಗಟ್ಟಿಮಾಡಿಕೊಂಡರು ಒಮ್ಮೊಮ್ಮೆ ಮೈ ಅವಳ ಮನಸಿನ ಮಾತು ಕೇಳದೆ ತಕರಾರು ತೆಗೆಯುತ್ತದೆ. ಅದರ ವಿರುದ್ದ ಬಂಡು ಸಾರುತ್ತದೆ. ಬೆನ್ನ ಹುರಿಗೆ ಬೆಂಕಿ ಹತ್ತಿದಂದಾಗಿ ಹಾಸಿಗೆಯಲ್ಲೇ ಚಡಪಡಿಸುತ್ತಾಳೆ. ಈ ರೀತಿಯ ವಿರಹ ಇದ್ದರೂ ಗೌಡನ ಮಾತಿಗೆ ಸೊಪ್ಪು ಹಾಕುವುದೇ ಇಲ್ಲ. ಇಲ್ಲಿ ಬೆಳ್ಳಿ ಗೌಡನೊಬ್ಬನಿಂದಲೇ ಶೋಷಣೆಗೆ ಒಳಗಾಗುತ್ತಿಲ್ಲ ಚುಂಚೂರು ಜೋಗಣೆ ಮರಗವ್ವಾನಿಂದಲೂ ಸಹ "ಏ ಬೆಳ್ಳಿ.....ನಿನ್ನೋಟಕ್ಕ ನೀ ಭಾಳಾ ದೊಡ್ಡ ಪತಿರತಿ ಅಂತ ತಿಳ್ಕೊಂಡಿದ್ದಿ ಏನಗ ಮಡಸ್ ಹೆಂಗಸಾ.... ಈ ಗಂಡಸರು ಮನಸು ಮಾಡದರಂದ್ರ ಏನು ಬೇಕಾದರನೂ ಮಾಡ್ತಾರ......" ನಿನಗ ಆ ಈರಪಾಗಸೆಪ್ಪ ಗೋಡನ ಮಂಚಕ್ಕೋಯ್ಲಿಲ್ಲಂದ್ರ ನಾ ಚುಂಚೂರು ಜೋಗಣೀನೇ ಅಲ್ಲಂತ ತಿಳ್ಕೋ...."[25] ಎಂದು ಬೆಳ್ಳಿಯ ಮೇಲೆ ಹಠಸಾಧಿಸುತ್ತಾಳಾದರೂ ಅದು ಸಾಧ್ಯವಾಗುವುದಿಲ್ಲ. ಇಲ್ಲಿ ಹೆಣ್ಣಿನ ಶೋಷಣೆ ಈ ರೀತಿ ನಡೆಯಲು ಕಾರಣವೇನೆಂದರೆ ಆರ್ಥಿಕತೆ ಮತ್ತು ಲಿಂಗದ ದೃಷ್ಟಿಯಿಂದ ನಮ್ಮ ಸಮಾಜ ನಡೆಸಿಕೊಳ್ಳುವ ರೀತಿ ನೀತಿಯೇ ಆಗಿದೆ.

ಲೈಂಗಿಕತೆಯನ್ನೇ ಮುಖ್ಯಕೇಂದ್ರವಾಗಿಟ್ಟುಕೊಂಡು ಎಲ್ಲಾ ರೀತಿಯ ಶೋಷಣೆಗಳನ್ನು ಈ ಸಮಾಜ ಮಾಡುತ್ತಿದೆ. ಪರವಧುವನ್ನು ಬಯಸುವುದು ಹೊಸದಲ್ಲ. ಆದರೆ ಬಲಿಪಶು ಮಾತ್ರ ಹೆಣ್ಣೆ. ಧರ್ಮದ ಹೆಸರಿನಲ್ಲಿ ದೈವದ ಹರಕೆಯಲ್ಲಿ ಹೆಣ್ಣು ಮಕ್ಕಳನ್ನು ದೇವರಿಗೆ ಜೋಗಿಣಿಯರನ್ನಾಗಿ ಬಿಡುವ ಮೂಲಕ ಶೋಷಣೆಯನ್ನು ಮಾಡುವುದು ಇದರಲ್ಲಿದೆ. 'ಫ್ರೇಜರ್' ಗಂಡಸರು ದೇವರನ್ನು ಸೃಷ್ಟಿಸುತ್ತಾರೆ. ಆ ದೇವರನ್ನು ಹೆಂಗಸರು ಪೂಜಿಸುತ್ತಾರೆ.[26] 'ಮನು ಸ್ಮೃತಿಕಾರ' ಕ್ರಮಬದ್ಧ ವಿವಾಹದ ಮೂಲಕ ಹೆಣ್ಣು ತನ್ನ ಮೂಲ ಲಕ್ಷಣಗಳನ್ನು ಕಳೆದುಕೊಳ್ಳುವಂತೆ ಸಾವಿನ ನಂತರ ಅವಳಿಗೆ ಆಗ ಸ್ವರ್ಗ ಪ್ರವೇಶ ಸಿಗುತ್ತದೆ.[27] ಖುರಾನ್ ದೇವರು ಗಂಡಸರಿಗೆ ನೀಡಿರುವ ಗುಣಗಳ ಪ್ರಮಾಣಗಳ ದೃಷ್ಟಿಯಿಂದ ಹೆಣ್ಣು ಅಧಮಳು ಅಲ್ಲದೇ ಈ ಗಂಡಸರು ಹೆಣ್ಣನ್ನು ಹಣತೆತ್ತು ಕೊಂಡುಕೊಳ್ಳುತ್ತಾರಾಗಿ ಅವರೇ ಉತ್ತಮರು.[28] 'ಎಕ್ಲೇಸಿಯಸ್ಸಸ್' ಹೆಣ್ಣು ಸಾವಿಗಿಂತಲೂ ಹೆಚ್ಚು ಕಹಿಯಾದವಳು. ಅವಳೆದೆಯಲ್ಲಿ ಬಲೆಗಳಿವೆ, ಬೋನುಗಳಿವೆ. ಅವಳ ಕೈಗಳು ಕಟ್ಟುವ ಹಗ್ಗಗಳು ಇಂಥ ಗಂಡಸರು ಸಾವಿರದಲ್ಲೊಬ್ಬರಾದರೆ ನಾನು ನೋಡಿದ ಎಲ್ಲ ಹೆಂಗಸರೂ ಇಂಥವರೇ.[29] ಈ ರೀತಿ ತತ್ವಜ್ಞಾನಿಗಳು ಹಾಗೂ ಎಲ್ಲಾ ಧರ್ಮಗಳು ಹೆಣ್ಣನ್ನು ಶೋಷಣೆಗೆ ಒಳಗು ಮಾಡುವಂತವುಗಳೇ ಆಗಿವೆ.

ಮಹಿಳೆಯರು ಎಲ್ಲಿ ಪೂಜಿಸಲ್ಪಡುತ್ತಾರೋ ಅಲ್ಲಿ ದೇವತೆಗಳು ನೆಲೆಸುತ್ತಾರೆ ಎಂದು ಹೇಳುವ ಹಿಂದೂ ಧರ್ಮದಲ್ಲಿ ದೇವತೆಯೆಂದು ಪೂಜಿಸುವುದು ಒಂದು ಕಡೆಯಾದರೆ, ದೇವರ ಹೆಸರಲ್ಲೇ ಹೆಣ್ಣನ್ನು ಅಮಾನವೀಯವಾಗಿ ದ್ವೇಷಿಸುವ ಮತ್ತು ಶೋಷಣೆಗೆ ಒಳಗುಮಾಡುವ ಹುನ್ನಾರು ಧರ್ಮದಲ್ಲಿದೆ. ಪ್ರಶ್ನೆಗಳನ್ನು ಕೇಳುವ ಹಾಗೂ ಪ್ರತಿಭಟನೆಯನ್ನು ಸೂಚಿಸುವ ಹಕ್ಕು ಮಹಿಳೆಯರಿಗೆ ಇಲ್ಲವೆಂಬ ತತ್ವವನ್ನು ಎಲ್ಲ ಧರ್ಮಗಳು ಒಂದಲ್ಲ ಒಂದು ರೀತಿಯಲ್ಲಿ ಸಾರಿ ಹೇಳುತ್ತದೆ. ಧರ್ಮವನ್ನು ಅದರ ಮೂಲಸ್ವರೂಪದಲ್ಲಿ ಅರಿಯುವ ಅವಕಾಶ ಕೂಡ ಮಹಿಳೆಗಿಲ್ಲ. ಪುರೋಹಿತಶಾಹಿ ಇಂದಿಗೂ ಧರ್ಮವನ್ನೂ ತನ್ನ ಹಿಡಿತದಲ್ಲಿಟ್ಟುಕೊಂಡಿದೆ. ಮಹಿಳಾ ಸ್ವಾತಂತ್ರ್ಯವನ್ನು ಧಮನ ಮಾಡಿ ಭೀಕರತೆಯ ವಾತಾವರಣವನ್ನು ಮಾಡುತ್ತಿದೆ. ಇಂತಹ ಧಾರ್ಮಿಕತೆಯ ಹುನ್ನಾರುಗಳಿರುವುದನ್ನು ಈ ಕಾದಂಬರಿಯಲ್ಲಿ ಕಾಣಬಹುದಾಗಿದೆ. ಭರಮ್ಯಾ ಮತ್ತು ಮರಗಿಯ ಮಗಳಾದ ನೀಲವ್ವನನ್ನು ಬೇಡವೆಂದು ಹೇಳುತ್ತಿದ್ದರೂ ಆಕೆಯನ್ನು ಜೋಗಿಣಿಯಾಗಿ ಮಾಡುತ್ತಾರೆ. 'ಜೋಗಣಿ' ಅಂದರೆ ಮಾಪುರ ತಾಯಿ ದೇವಿಯ ಸೇವಾಕ್ಕೆ ಪೂರಾ ಮೀಸಲಾದ ಹೆಣ್ಣು ಅವಳು ಸಾಯುವವರೆಗೂ ಬೇರೆ ಮದುವೆಯಾಗುವಂತಿಲ್ಲ. ಪಟ್ಟಕ್ಕೆ ಹಾಕಿಕೊಂಡ ಗೌಡನೋ, ಕುಲಕರ್ಣಿಯೋ, ಸಾವ್ಕಾರನೋ ಅವಳ ಮೈಯ ಮೀಸಲು ಮುರಿದು,

ಕನ್ಯತನ ಕಳೆದು ಅವಳನ್ನೂ ಹೆಣ್ಣು ಮಾಡುತ್ತಾನೆ. ಅಷ್ಟು ಮುಂದೆಲ್ಲ ಅವಳು ದೇವಿಯ ಹೆಸರಿನ ಮೇಲೆ, ಬಂದ ಗಂಡಸರಿಗೆಲ್ಲ ಸೆರಗು ಹಾಸುತ್ತ ಅವರ ಮಗ್ಗಲು ಬಿಸಿ ಮಾಡುತ್ತ ಅವರ ಕಾಮದ ತಿಂಡಿಗೆ ಬಲಿಯಾಗುತ್ತ ದಿನಗಳೆಯಬೇಕು. ಅವಳಿಗೆ ಹುಟ್ಟುವ ಮಕ್ಕಳಿಗೆ ತಂದೆಯ ಹೆಸರಿಲ್ಲ, ತಾಯಿಯದೇ ಹೆಸರು. ಅವಳು ಅಧಿಕೃತವಾಗಿ ಸೂಳೆಯಾಗುತ್ತಾಳಷ್ಟೇ, ದಂಧೆ ಅದೇ ಹೆಸರು ಮಾತ್ರ ಸೂಳೆಯಲ್ಲಿ 'ಜೋಗಣಿ'.[30] ತನ್ನ ಬಂಜೆತನ ಕಳೆಯಲು ದೇವರಲ್ಲಿ ಹರಕೆ ಹೊರುವುದು, ಮಕ್ಕಳಾದ ಮೇಲೆ ದೇವರಿಗೆ ಮೀಸಲು ಬಿಡುವುದು ಹೆತ್ತ ತಾಯಿ ತಂದೆಗಳೇ ದುರುಗಿ ಮುರುಗಿಯರಾದರೆ, ತನ್ನ ಗಂಡನ ಪ್ರಾಣ ಉಳಿಸಿಕೊಳ್ಳಲು ಜೋಗಿಣಿಯಾಗಿ ಬಿಡುತ್ತೇನೆಂದು ಹರಕೆಯಿಂದಾಗಿ ನೀಲವ್ವ ಇಷ್ಟವಿಲ್ಲದಿದ್ದರೂ ಜೋಗಿಣಿಯಾಗಿ ಸಾವಿನ ಮೂಲಕ ಪ್ರತಿರೋಧನೆಯನ್ನು ಒಡ್ಡಿದರೆ ತುಳಜಾ ಈ ಜೋಗಿಣಿ ತನವನ್ನೇ ಬಿಟ್ಟು ಹುಸೇನಪ್ಪನನ್ನು ಮದುವೆಯಾಗುವುದು, ಊರಿನಿಂದ ತನ್ನ ತಂದೆ ತಾಯಿಯನ್ನು ಕರೆದುಕೊಂಡೋಗುವುದರ ಮೂಲಕ ಪ್ರತಿಭಟಿಸುತ್ತಾಳೆ. ಈಕೆಯ ಮಾತಿನಲ್ಲಿ ಅಸಹಾಯಕತೆಯನ್ನು ಗಮನಿಸಬಹುದು. 'ಅಯ್ಯೋ...ಇದು ಭಾಳ ಹೊಲಸ ಕೆಲಸಾ ಅಂತ ನನಗ ಹೇಸಕಿ ಬರ್ತಾದ್ರೀ ಅದರೇನು ಮಾಡ್ಲಿ? ಅವಾಗ ನಮ್ಮೂರಾಗ ನನಗ ಮದತ್ತು ಮಾಡುವ ಗಂಡಸ್ಯಾರು ಇರಲಿಲ್ಲರೀ ನಮ್ಮಪ್ಪಾ ನಮ್ಮವ್ವಾ ಗುಡಿ ಪೂಜಾರಪ್ಪ ನಮ್ಮ ಕೇರಿ ಮಂದೀ, ಊರಾಗಿನ ದೊಡ್ಡವರೆಲ್ಲಾ ಕೂಡಿ ನನಗ ಜಬರದಸ್ತಿನಿಂದ ಜೋಗಣಿ ಮಾಡ್ಯಾರಂತ ಹೇಳಿನೆಲ್ಲರೀ ಆ ದೇವರ ಮ್ಯಾಲೇನೂ ನನಗ ನಂಬಿಕೆಯಿಲ್ಲ ಬಿಡ್ರಿ. ಏನೂ ಅರೀದ ಹೆಣ್ಣು ಮಕ್ಕಳಿಗೆ ಈಟು ತರಾಸಕುಡಕ್ಕಿ ಅಕಿಗೂ ಒಂದು ಹೆಣ್ಣ ದೇವರೇನ್ರೀ.. ಅಕಿನ ಗುಡಿ ಹೊಸ್ತಲಕ್ಕ ತೆಲಿ ಒಡ್ಕೊಂಡು ಗೋಳ್ಯಾಡಿ ಆತ್ತೀನಿ ನಾನೂ... ಆದರ ಅಕಿಗಿ ನನ್ನ ಮ್ಯಾಲ ಕರುಣಾನೇ ಬಂದಿಲ್ಲ."[31]

ಹೆತ್ತವರ ಹರಕೆಗೆ ಹರೆಯದ ಹೆಣ್ಣುಮಕ್ಕಳು, ಈ ರಿವಾಜಿನಿಂದಾಗಿ ದೇವಿಹೆಸರಿನ ಹಣೆ ಪಟ್ಟಿ ಹಚ್ಚಿಕೊಂಡು ಸೂಳೆಗಾರಿಕೆಗೆ ಇಳಿಯುತ್ತಾರೆ. ಇದರ ಮಜಾ ಮಾಡುವವರು ಮೇಲು ವರ್ಗದ ಸಿರಿವಂತ ಗಂಡಸರೆ. "ಹುವ್ವಿನಂಥಾ ಗಲ್ಲದಕ್ಕಿ......."[32] ಈ ರೀತಿಯಾಗಿಯೇ ಜೋಗಿಣಿಯರನ್ನು ಮಾತನಾಡಿಸುವುದು ಮತ್ತು ನಡೆಸಿಕೊಳ್ಳುವುದು ಇದಕ್ಕೆ ವಿರೋಧ ಧ್ವನಿಯನ್ನು ಹಿರಿಯ ಜೋಗಿಣಿಯಾದ ನಿಂಬೆವ್ವನು ಜೋಗಿಣಿಯಾಗುತ್ತಿರುವ ತುಳಜಾಳನ್ನು ಕುರಿತು ಹೇಳುತ್ತಿದ್ದಾಳೆ. "ಚುಂಚೂರು ದೇವತೆ ಅದುನೂ ಹೆಣ್ಣು ದೇವರು, ಹೆಣ್ಣು ದೇವರೆ ಹೆಣ್ಣು ಮಕ್ಕಳು ಮರ್ವಾದಿ ಬಿಟ್ಟು ಸೂಳೇರಾಗ್ರಿ ಅಂತ ಯಾವ ಬಾಯಿಯಿಂದ ಹೇಳ್ತದೆ? ತನ್ನ ಹೆಸರಿನ ಮ್ಯಾಲ ಹಾದರದ ಧಂಧಾ ಮಾಡ್ರಿ ಅಂತ ಯಾ ದೇವರೂ ಹೇಳಂಗಿಲ್ಲ. ಮದಿ ಮಾಡ್ಕೊಂಡು

ಒಬ್ಬ ಗಂಡನ ಹೆಣ್ಣಾಗಿ, ಗರತಿ ಆಗಿ ಬಾಳ್ಯಾ ಮಾಡ್ರಿ ಅಂತ ಹೇಳ್ತಾವ, ಎಲ್ಲಾ ದೇವರುಗೋಳು ಅಲ್ಲ ಮಗಾ ಅದು ದೊಡ್ಡ ದೊಡ್ಡ ಮ್ಯಾಲಿನ ಜಾತಿ ಹೆಂಗಸರು ಯಾರರೆ ಜೋಗಣೀರಾಗಿ ಹಿಂಗ್ ಮೈ ಮಾಕ್ಕೋಳ್ಳಾ ಧಂಧಾಕ್ಕೆ ನಿಂತಿದ್ದು ಹಿಂದಕ್ಕಾ ಎಲ್ಲೆರೆ ಕೇಳಿದ್ದೇನು ನೀನು?[33] ಎಂಬಂತಹ ವೈಚಾರಿಕತೆಯ ಮಾತನ್ನೇಳುತ್ತಿದ್ದಾಳೆ. ಇಲ್ಲಿನ ಪೂಜಾರಿ ಕೆಳವರ್ಗದವನಾದರೂ ತನ್ನ ವರ್ಗದ ಹೆಣ್ಣು ಮಕ್ಕಳನ್ನು ಮೇಲ್ವರ್ಗಕ್ಕೆ ಕೊಡುವಂತಹ ಮಧ್ಯಸ್ಥಿಕೆಯ ಕೆಲಸವನ್ನು ಮಾಡುತ್ತಾನೆ. ಎರಡು ವರ್ಗಗಳ ನಡುವಿನ ಆಟಿಕೆಯಾಗಿದ್ದಾನೆ. ಈ ಜೋಗಿಣಿ ಪದ್ಧತಿ ಈ ರೀತಿ ನೆಲೆಯೂರಿರುವ ಕಾರಣ ಧರ್ಮದ ಮೂಲಭೂತವಾದಿತನ, ಪಟ್ಟಾಭದ್ರಾಹಿತಾಸಕ್ತಿಗಳ ಆಕ್ರಮಣ ಮತ್ತು ದೌರ್ಜನ್ಯ, ಬಡತನ ,ವಿವೇಚನಾಶಕ್ತಿಯ ಅಭಾವ, ಮೂಢನಂಬಿಕೆಗಳು, ದೇವರಿಗೆ ಅರ್ಪಣೆ, ಮಾಡುವುದರಲ್ಲಿ ತೃಪ್ತಿ, ಶ್ರೀಮಂತರ ಹಾಗೂ ಮೇಲ್ವರ್ಗದ ರೀತಿ ರಿವಾಜುಗಳೇ ಕಾರಣವಾಗಿವೆ. ಸಾಮಾಜಿಕ ಸಮಸ್ಯೆಗಳ ಮಹಿಳೆಯ ಬದುಕಿನ ದಾರುಣತೆಯ, ದಲಿತರ ಮೇಲೆ ನಡೆಯುವ ದೌರ್ಜನ್ಯಗಳ ,ಧಾರ್ಮಿಕ ಸೋಗಲಾಡಿತನದ ವಿರುದ್ಧ ಅತ್ಯಂತ ವೈಚಾರಿಕವಾಗಿ ಪ್ರತಿಭಟನಾತ್ಮಕತೆಯನ್ನು ತಮ್ಮ ಕಾದಂಬರಿಗಳಲ್ಲಿ ಬಿಂಬಿಸಿದ್ದಾರೆ. ಜೊತೆಗೆ ವ್ಯವಸ್ಥೆಯನ್ನು ಮುರಿದು ಹೊರಗೆ ಬಂದರೂ ಮತ್ತೆ ಅದೇ ವ್ಯವಸ್ಥೆಯಲ್ಲಿಯೇ ಸಿಲುಕುವ ಪಾತ್ರಗಳನ್ನು ನಿರ್ಮಿಸಿದ್ದಾರೆ.

ಶೋಷಣೆಯ ಸಮಗ್ರ ಪರಿಜ್ಞಾನವನ್ನು ಹೊಂದುವುದು ಅಂದರೆ ಸ್ತ್ರೀಯರು ಪುರುಷ ಶಾಹಿಯ ವಿರುದ್ಧ ಹೋರಾಟ ಮಾಡುವುದರ ಅವಶ್ಯಕತೆಯನ್ನು ಮನದಟ್ಟುಮಾಡಿಕೊಡುವುದಕ್ಕೇ ಅಲ್ಲ. ಸ್ತ್ರೀಯರ ಶೋಷಣೆಯನ್ನು ಪುರುಷರಿಂದ ಮಾಡಿಸುತ್ತ ಬಂದಿರುವ ಹಾಗೂ ಪುರುಷರನ್ನು ಇನ್ನೊಂದು ಶ್ರೇಣಿಯಲ್ಲಿ ಶೋಷಣೆಗೊಳಪಡಿಸಿರುವ ವರ್ಗ ವ್ಯವಸ್ಥೆಯನ್ನು ಸ್ತ್ರೀಯರೂ ಪುರುಷರೂ ಜಂಟಿಯಾಗಿ ಹಾಗೂ ಸಾಮೂಹಿಕವಾಗಿ ಪ್ರಶ್ನಿಸುವಂತೆ ಕೊನೆಯಲ್ಲಿ ಕಿತ್ತೊಗೆಯುವಂತೆ ಸರಿಯಾದ ಮಾರ್ಗದರ್ಶನ ಗಳಿಸುವುದು. ಹೀಗೆ ಮಹಿಳೆಯರ ಮತ್ತು ದಲಿತರ, ಧಮನಕ್ಕೊಳಗಾದವರ ಕಥೆ ಜೊತೆಯಲ್ಲೇ ಬೆರೆತಿದೆ. ಈ ಇಬ್ಬರೂ ಮೀರಬೇಕಾದಂತಹ ಎರಡೂ ಆಯಾಮಗಳೆಂದರೆ 1.ವೈದಿಕ ಹಿತಾಸಕ್ತಿ (ಉತ್ಪಾದನಾ ವ್ಯವಸ್ಥೆಯ ವಾರಸುದಾರಿಕೆಯನ್ನು ಹೊತ್ತುಕೊಂಡಿರುವ ಯಜಮಾನ ಸಂಸ್ಕೃತಿ) 2.ಯಜಮಾನ ಸಂಸ್ಕೃತಿಯನ್ನು ಉಸಿರಾಗಿಸಿಕೊಂಡಿರುವ ವ್ಯಕ್ತಿತ್ವ. ಇವನ್ನು ಮೀರಿದಾಗ ಮಹಿಳೆಯರ ಮತ್ತು ದಲಿತರ ಬದುಕು ಸ್ವಲ್ಪ ಮಟ್ಟಿಗೆ ಬದಲಾವಣೆಯಾಗಬಹುದೆಂದು ಮಲ್ಲಿಕಾ ಘಂಟಿಯವರು ಹೇಳುತ್ತಾರೆ.[34]

12ನೇ ಶತಮಾನದಲ್ಲಿ ರೆಮ್ಮವ್ವೆ ಹೇಳುವ ಹಾಗೆ "ಎಲ್ಲ ಗಂಡಂದಿರು ಮೇಲೆ, ನನ್ನ ಗಂಡ ಕೆಳಗೆ, ನಾಮೇಲೆ" ಎಂದು ಪುರುಷ ಪ್ರಾಧಾನ್ಯತೆಯ ರಾಜಕಾರಣವನ್ನು ಪ್ರತಿನಿಧಿಸುವ ವೈಚಾರಿಕತೆಯ ಮಾತನ್ನು, "ನಾನೇನಾದರೂ ಹೆಣ್ಣಾಗಿ ಹುಟ್ಟಿದರೆ ಹೆಣ್ಣನ್ನು ಆಟಿಕೆಯ ವಸ್ತು ಎಂದು ತಿಳಿದುಕೊಂಡ ಗಂಡಿನ ಮೇಲೆ ದಂಗೆಯನ್ನು ಹೂಡುತ್ತಿದ್ದೆ."[35] ಎಂದು ಅಂದೇ ಚಿಂತಿಸಿದ ಗಾಂಧೀಜಿಯವರ ಮಂತ್ರ ಇಂದಿನ ಮಹಿಳೆಯರ ಅಸ್ತ್ರವಾದರೂ ಸಹ ಜಾಗತೀಕರಣ ಮತ್ತು ಅಭಿವೃದ್ಧಿಯ ಹೆಸರಲ್ಲಿ ಮಹಿಳೆ ಆಧುನಿಕತೆಯಲ್ಲೂ ಶೋಷಣೆಗೆ ಒಳಗಾಗುತ್ತಿದ್ದಾಳೆ. ಶೋಷಣೆ ಹೆಣ್ಣಿನ ಬದುಕಿನಲ್ಲಿ ಹೊಸದಲ್ಲವಾದರೂ ಅದರ ನೆಲೆ ಮತ್ತು ಮುಖಗಳು ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಉಳಿಯುವ ಸಾಮಾಜಿಕ ಅಂಶಗಳೇ ಆಗಿವೆಯೇ? ಶೋಷಣೆಗೆ ಕೊನೆಯೇ ಇಲ್ಲವೇ? ಅನ್ನಿಸುತ್ತದೆ.

ಭಾರತೀಯ ಸಮಾಜದ ಆರ್ಥಿಕ ವ್ಯವಸ್ಥೆಯು ಮಹಿಳೆಯರನ್ನು ಬಹುರೂಪಿ ಶೋಷಣೆಯ ಬಲೆಯಲ್ಲಿ ಅತ್ಯಂತ ಸಂಕೀರ್ಣವಾಗಿ ಸಿಲುಕಿರುವ ಕಾರಣ ಎಲ್ಲರ ಸಮಸ್ಯೆಗಳನ್ನು ಒಂದೇ ತಕ್ಕಡಿಯಲ್ಲಿ ತೂಗಲಾಗದು. ಯಾವುದೇ ರೀತಿಯ ನಿರ್ವಚನ, ತಾತ್ವಿಕ ನೆಲೆಗಳನ್ನು ಬಿಟ್ಟು ಲಿಂಗರಾಜಕಾರಣದ ಆಚೆಗಿರುವಂತಹ ಮಾನವೀಯ ತುಡಿತಗಳನ್ನು ಸಮಷ್ಟಿಯಾಗಿ ಗ್ರಹಿಸಿದಾಗ ಮಾತ್ರ ಇದು ಸಾಧ್ಯವಾಗುತ್ತದೆ.

**ಅಡಿಟಿಪ್ಪಣೆಗಳು**

1. ಮಲ್ಲಿಕಾ ಘಂಟಿ: ದಲಿತ ಮತ್ತು ಬಂಡಾಯ ಸಾಹಿತ್ಯದಲ್ಲಿ ಬದಲಾವಣೆ ಆಶಯ ಮತ್ತು ಸ್ತ್ರೀ ಪುಟ. 177.
2. ಅದೇ ಪುಟ 93
3. ಸುಮಿತ್ರಾಬಾಯಿ ಬಿ.ಎನ್: ಸ್ತ್ರೀವಾದ. ಪುಟ23
4. ಗೀತಾನಾಗಭೂಷಣ: ಹಸಿಮಾಂಸ ಮತ್ತು ಹದ್ದುಗಳು. ಪುಟ15
5. ಅದೇ ಪುಟ12
6. ಅದೇ ಪುಟ46,47
7. ಅದೇ ಪುಟ48
8. ಗೀತಾನಾಗಭೂಷಣ: ಆಸರೆಗಳು, ಪುಟ3
9. ಅದೇ ಪುಟ8
10. ಅದೇ ಪುಟ14

11. ಅದೇ ಪುಟ24
12. ಅದೇ ಪುಟ36
13. ಅದೇ ಪುಟ102
14. ಅದೇ ಪುಟ118–119
15. ಅದೇ ಪುಟ140
16. ಅದೇ ಪುಟ153
17. ಅದೇ ಪುಟ153
18. ಅದೇ ಪುಟ44
19. ಅದೇ ಪುಟ128–129
20. ಗೀತಾನಾಗಭೂಷಣ: ಬದುಕು. ಪುಟ40
21. ಅದೇ ಪುಟ105
22. ಅದೇ ಪುಟ439
23. ಅದೇ ಪುಟ294
24. ಅದೇ ಪುಟ605
25. ಅದೇ ಪುಟ429
26. ಅದೇ ಪುಟ432
27. ಶ್ರೀಮತಿ ಎಚ್.ಎಸ್(ಅ):ದ ಸೆಕೆಂಡ್ ಸೆಕ್ಸ್. ಪುಟ88.
28. ಅದೇ ಪುಟ92
29. ಅದೇ ಪುಟ95
30. ಅದೇ ಪುಟ96
31. ಗೀತಾನಾಗಭೂಷಣ: ಬದುಕು ಪುಟ46
32. ಅದೇ ಪುಟ208
33. ಅದೇ ಪುಟ204
34. ಅದೇ ಪುಟ206
35. ಮಲ್ಲಿಕಾ ಘಂಟಿ : ದಲಿತಬಂಡಾಯ ಸಾಹಿತ್ಯದಲ್ಲಿ ಬದಲಾವಣೆ ಆಶಯ ಮತ್ತು ಸ್ತ್ರೀ, ಪುಟ176
36. ಪ್ರೇಮಾ ಸಿರ್ಸೆ: ಮಹಿಳಾಸಾಹಿತ್ಯ ಮತ್ತು ಸವಾಲುಗಳು, ಪುಟ86.

ಅಧ್ಯಾಯ – 3

# ಗೀತಾರವರ ಬರಹದ ವಿಶಿಷ್ಟತೆ

1. ಕಥನ ತಂತ್ರ ಮತ್ತು ನಿರೂಪಣಾ ವಿಧಾನ
2. ಸ್ತ್ರೀ ಪಾತ್ರ ಚಿತ್ರಣ

## ಅಧ್ಯಾಯ – 3

## ಗೀತಾರವರ ಬರಹದ ವಿಶಿಷ್ಟತೆ

"ಏ ಶೂದ್ರ ಮುಂಡೇದೇ........ ದೂರ ಕೂಡು ಅಕಾಡಿ...... ನಮ್ಮ ಹುಡ್ರ ಸರಿಜೋಡಿ ಕುಂತು ಓದಿಯ್ತೇನೇ ........ ಥೂ ........ ಸಲಿಗಿ ಕೊಟ್ಟ ನಾಯಿ ತೆಲಿಮೂಸಿ ನೋಡಿತಂತೆ.... ಈ ಕೆಳಮಂದಿಗೆಲ್ಲಾ ಸಮೀಪ ಕರ್ಕೋಬ್ಯಾಡ್ರೋ ಅಂದ್ರ ನನ್ನ ಮಾತೆಲ್ಲಿ ಕೇಳ್ತಾನ ನನ್ನ ಮಗಾ ನಮ್ಮ ಪಾರುಗೋಳ ಜತಿ ಆಕಿನೂ ಓದ್ಕೋಲಿ ಪಾಪ... ಅಂತಾನ ............. ಹಿಟ್ಟೂ ಬೂದಿ ಸಮಾಯೇನು?"

"ಏ ಪೋರೀ.........ಇಕಾ............ನಮ್ಮ ಹುಡ್ರೆಲ್ಲಾ ತಿಂದು ಒಂದಿಷ್ಟು ಉಪ್ಪಿಟ್ಟು ಉಳದದ ನೋಡು..........ತಗೋ..........ತಿನ್ನು..........."ಅಂತ ನನ್ನನ್ನು ಕರೆಯುತ್ತಿದ್ದರು. ನಾನು ಅವರಮುಂದೆ ನಿಂತು ಕೈ ಒಡ್ಡುತ್ತಿದ್ದೆ. ಪತ್ರೋಳಗಿಯಲ್ಲೋ, ಹಳೆಯ ರದ್ದಿಕಾಗದದ ಮೇಲೋ ಅದನ್ನಿಟ್ಟು ಅಷ್ಟು ಎತ್ತರದಿಂದಲೇ ನನ್ನ ಕೈಗೆ ಧೊಪ್ಪನೆ ಬಿಸಾಕುತ್ತಿದ್ದರು. ಪುಣ್ಯಕ್ಕೆ ಅದು ನನ್ನ ಕೈಯಲ್ಲಿ ಬಿದ್ದು ಭಾರ ಸಂಭಾಳಿಸಿದರೆ ಸರಿ. ಆದರೆ ಕೆಲವೊಮ್ಮೆ ಅದು ಜೋರಾಗಿ ಬಿದಾಗ ನನ್ನ ಪುಟ್ಟ ಕೈಗಳಿಗಮರದೆ ದಢಕ್ಕನೆ ಕೆಳಗೆ ಬೀಳುತ್ತಿತ್ತು. ಆಗ ಉಪ್ಪಿಟ್ಟು ನೆಲದ ಮೇಲೆ ಚೆಲ್ಲಾಪಿಲ್ಲಿಯಾಗಿ ಹರಡಿದಾಗ ನನ್ನ ಕಣ್ಣಲ್ಲಿ ನೀರುದಟ್ಟಿಸುತ್ತಿತ್ತು.

"ಥೂ ನಿನ್ನ.........ಕೊಟ್ಟಿದ್ದು ಛೋಲೋತನ್ಯಾಗಿ ಸಂಭಾಳಿಸ್ಗೊಂಡು ತಗೊಂಡು ತಿಲ್ಲಕ್ಕನೂ ಬರಂಗಿಲ್ಲಲ್ಲೇ ನಿನಗಾ? ದಡ್ಡ ಮುಂಡೀದು..........ಅದೆಲ್ಲಾ ಮ್ಯಾಲಿಂದು ಬಳ್ಕೊಂಡು, ಬ್ಯಾರೆ ಪತ್ರೋಳಗಿ ಕುಡ್ತೇನಿ, ಹಾಕ್ಕೊಂಡು ತಿನ್ನು, ಕೆಳಗಿಂದೆಲ್ಲಾ, ಬಳ್ದು ಚೆಲ್ಲಾ. ನೆಲಕ್ಕ ನೀರ್ಹಾಕಿ ಸಾರಿಸಿಬಿಡು........." ಅಂತ ಆ ಹೆಂಗಸರ ಅಪ್ಪಣೆಯಾಗುತ್ತಿತ್ತು. ಸುತ್ತ ನೆರೆದ ಹುಡುಗರೆಲ್ಲ ಕಿಸಿಕಿಸಿ ನಗುತ್ತಿದ್ದವು ನೆಲದ ಮೇಲೆ ಬಿದ್ದದ್ದನ್ನು ಬಳ್ಕೊಂಡು ತಿನ್ನಲು ನನಗೆ ಮನಸ್ಸಿರುತ್ತಿರಲಿಲ್ಲ. ತೀರ ಅವಮಾನವಾದಂತಾಗಿ ಎಲ್ಲವನ್ನೂ ಬಳಿದೊಯ್ದು ತಿಪ್ಪೆಗೆಸೆದು ಬಂದು ನೀರಿನಿಂದ ನೆಲಸಾರಿಸುತ್ತಿರುವಾಗ ನನಗೆ ಜೀವ ಹೋದಂಗಾಗುತ್ತಿತ್ತು. "ಏ........ಎಷ್ಟು ಸೊಕ್ಕೇ ನಿನಗೆ? ಮ್ಯಾಲಿಂದು ಬಳ್ಕೊಂಡು ತಿನ್ನು ಅಂದ್ರ ಎಲ್ಲೋ ಎತ್ತಿ ತಿಪ್ಪಿಗೆಹಾಕಿ ಬಂದೆಲ್ಲ? ಅನ್ನದ ಮ್ಯಾಲ ಇಷ್ಟು ಸೊಕ್ಕು ತೋರಸ್ತೆಲ್ಲ, ಅದಕ್ಕೇ ನಿಮ್ಮ ಶೂದ್ರಮಂದಿಗಿ ಆ ದೇವರು ಹೊಟ್ಟೆತುಂಬಾ ಅನ್ನಾಕೊಟ್ಟಿಲ್ಲ. ಪಾಪಿಷ್ಟ ಮುಂಡೇವು.......ದರಿದ್ರ ಸಂತಾನ............." ಅಂತ ಆ ತಾಯಂದಿರು ಬೈಯುತ್ತಿದ್ದರು. ನೀರು ಕೊಡುವಾಗಲೂ ಅಷ್ಟೇ ಅವರು ತಂಬಿಗೆಯೆತ್ತಿ ಮೇಲಿನಿಂದ ಹಾಕಬೇಕು,.

ನಾನು ಬೊಗಸೆಯೊಡ್ಡಿ ಕುಡೀಬೇಕು. ಅವರು ನಮಗೆ ಚಹ ಕೋಡುವಾಗಲಂತೂ ನಮಗೆಂತಲೇ ಒಂದು ಕಿವಿ ಹರಕುಕಪ್ಪು ಬೇರೆಯೇ ಇಟ್ಟಿರುತ್ತಿದ್ದರು. ಅದರಲ್ಲೆ ಚಹ ಹಾಕಿಸಿಕೊಂಡು ಕುಡಿದು ಅದನ್ನೇ ಬೂಡಿಹಚ್ಚಿ ತೊಳೆದು ಹೊರಗಿನ ಮಾಡದಲ್ಲಿಡಬೇಕು.

ಇಷ್ಟೆಲ್ಲಾ ಹಿಂಸೆ ಕೊಟ್ಟು ಚುಚ್ಚುತ್ತಿದ್ದರಾದರೂ ತಿಂಡಿತಿನ್ನುವುದು ಚಹ ಕುಡಿಯುವುದನ್ನೇ ನಿಲ್ಲಿಸಿದರೂ ಸುಂದ್ರಾಬಾಯಿಯಂಥ ಮುದುಕಿಯರಿಗೆ ಸಹನೆಯಿರುತ್ತಿರಲಿಲ್ಲ. ನನ್ನ ಅಪ್ಪನನ್ನು ಕರೆದು, ಒಂದುಕ್ಕೆರಡು ಪೋಣಿಸಿ, ಉಪ್ಪುಕಾರ ಹಚ್ಚಿ ಜಾಡಿ ಚುಗಲಿ ಹೇಳುತ್ತಿದ್ದರು.

ಕಾರ್ತಿಕ ಮಾಸದಲ್ಲಿ ನಸುಕಿನಲ್ಲೇ ಎದ್ದು ಸ್ನಾನಮಾಡುವುದು. ಉಪವಾಸ ಮೊದಲಾದವುಗಳನ್ನು ಮಾಡುತ್ತಿರುವಾಗ ಜನರು ಮುಸುಮುಸುನಗುತ್ತಿದ್ದರು. “ಏನೇ ಕಮಲಾ... ಸ್ನಾನ ಮುಗಸ್ಗೊಂಡು ಬಂದೇನು? ಈಗೇನು ಬಿಡು ಹೊಲಮಾದರು ಮೊದಲು ಮಾಡಿ ಹದಿನೆಂಟು ಶೂದ್ರ ಮುಂಡೇವೆಲ್ಲಾ ಕಾರ್ತಿಕ ಸ್ನಾನ, ಏಕಾದಶಿ, ಎಲ್ಲಾ ಮಾಡ್ಲಕತಾವ ಸುಟ್ಟು ಬರ್ಲಿ.......... ಏನಾದ್ರೇನು ನವಿಲ ಕುಣಿತಾದಂತೆ ಕೋಳಿನೂ ಕುಣೀಲಕ್ಕೆ ಹೋಗಿ ಕಾಲು ಮುರ್ಗೊಂಡಿತ್ತಂತೆ ಹಂಗಾಗ್ತದ ಅಷ್ಟೇ..”ಒಬ್ಬಳ ಧ್ವನಿ, ಅಷ್ಟಲ್ದೆ ಮತ್ತಿನ್ನೇನು ಬಿಡ್ರೀ ಮಾವಸೀ..........ಕೋಗಿಲು ಹಾಡ್ತಾದಂತೆ ಕಾಗೀನಿ ಹಾಡ್ಲಕ್ಕಾಗ್ತಾದೇನ್ರಿ? ಅದರ ಗಂಟಲದಿಂದ ಕ್ರಾ ಕ್ರಾ ಅಂತ ಕರ್ಕಷ ದನೀನೇ ಹೊರಡಾದೂ...”

ನಾನು ಹುಟ್ಟಿದ್ದು ತಳವಾರದಂಥ ತೀರ ಕೆಳಜಾತಿಯ ಅನಕ್ಷರಸ್ಥ ಬಡಕುಟುಂಬದಲ್ಲಿ ನನ್ನ ಅವ್ವ ಹಳ್ಳಿಯ ಹೆಣ್ಣುಮಗಳು. ಅಪ್ಪ ಕಲಬುರ್ಗಿಯ ಬಟ್ಟೆ ಗಿರಣಿಯಲ್ಲಿ ಕಾರ್ಮಿಕನಾಗಿದ್ದು ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿ ಜೈಲುಸೇರಿ ಬಂದವನು. ಹೀಗಾಗಿ ಬಡತನ, ಅನಕ್ಷರತೆಯ ಕೆಳವರ್ಗದ ಕುಟುಂಬದಲ್ಲಿ ಹುಟ್ಟಿದ್ದರೂ ನನ್ನ ಅಪ್ಪ ನನ್ನನ್ನು ಶಾಲೆಗೆ ಕಳಸಿದ್ದು ಸುದೈವ. ಪುಸ್ತಕದ ಪ್ರೀತಿ, ಓದುವ ಅದಮ್ಯ ಆಸೆಯಿಂದಾಗಿ, ನಾನು ಮ್ಯಾಟ್ರಿಕ್ ಪಾಸಾದ ನಂತರ ಕಾಲೇಜಿಗೆ ಹೋಗುವ ಹಟ ಹಿಡಿದಾಗ ನನ್ನನ್ನು ಗಂಡಸರ ನಡುವೆ ಕಲಬುರ್ಗಿಯ ಕಲೆಕ್ಟರ್ ಕಛೇರಿಯಲ್ಲಿ ನೌಕರಿಗೆ ದೂಡಿತು ಈ ಬದುಕು.

ಎಲ್ಲರಂತೆ ಸಾಮಾನ್ಯ ಹೆಣ್ಣು ಮಗಳಾಗಿ ಹತ್ತರಲ್ಲಿ ಹನ್ನೊಂದನೆಯವಳಾಗಿ ಬದುಕಿ, ಸಾಯುವುದು ನನಗೆ ಬೇಕಾಗಿಲ್ಲ. ಎಲ್ಲರಿಗಿಂತ ನಾನು ಭಿನ್ನವಾಗಿ ನಿಂತು ನನ್ನದೇ ಆದ ವಿಶಿಷ್ಟತೆಯನ್ನು ಹೊಂದಬೇಕೆಂಬ ಛಲ ನನ್ನೆದೆಯ ತಳದಲ್ಲಿ ಬತ್ತದ ಗಂಗೆಯಾಗಿ

ಹರಿಯುತ್ತಿರುವಾಗಲೇ ನಾನು ನನಗೆ ಬಂದ ಎಲ್ಲ ಸಮಸ್ಯೆಗಳನ್ನು ಸವಾಲಾಗಿಯೇ ಸ್ವೀಕರಿಸಿ ಬದುಕಲು ನಿರ್ಧರಿಸಿದ್ದೆ. ಆಗ ಬಂದವು ನೋಡಿ ಸಂಕಟಗಳ ಸರಮಾಲೆ. ಈ ಸಮಾಜದ ರೂಢಿ ರಿವಾಜುಗಳ ವಿರುದ್ಧ, ನೀತಿ ಸಂಪ್ರದಾಯಗಳ ವಿರುದ್ಧ, ಕೆಟ್ಟ ವ್ಯವಸ್ಥೆಯ ವಿರುದ್ಧ ಬಂಡು ಸಾರುತ್ತ ಮುನ್ನಡೆದೆ. ನಮ್ಮ ಜಿಲ್ಲೆಯ ಚುಂಚೂರು ಮಾಪ್ಪರತಾಯಿಗೆ ಬೆತ್ತಲೆ ಸೇವೆ. ದೇವಿಯ ಹೆಸರಿನ ಮೇಲೆ ನಡೆಸುವ ದೌರ್ಜನ್ಯ, ದಬ್ಬಾಳಿಕೆ, ಲೈಂಗಿಕ ಶೋಷಣೆ ಮೊದಲಾದ ಆಗ ಚಾಲ್ತಿಯಲ್ಲಿದ್ದ ಮೂಢನಂಬಿಕೆಗಳ ವಿರುದ್ಧ ಮೂಲಾಜಿಲ್ಲದೆ ಬರೆಯತೊಡಗಿವೆ. ನನ್ನ ಜಿಲ್ಲೆಯ ಹಳ್ಳಿಯ ಜವಾರಿ ಭಾಷೆಯಲ್ಲಿ.

ಇದು ಜಾತಿಯಿಂದಾದರೆ ವೈಯುಕ್ತಿಕ ಬದುಕು ಹೀಗಿದೆ. ಬದುಕಿನಲ್ಲಿ ಬಂದ ಕಹಿ, ಕೆಟ್ಟ ಅನುಭವಗಳೇ ನನ್ನನ್ನು ಬರೆಯಲು ಒತ್ತಾಯ ಮಾಡಿದವು ಅನ್ನುವುದು ಮಾತ್ರ ಸೋಳಾಣೆಯ ಸತ್ಯ ನನ್ನ ವೈಯಕ್ತಿಕ ನೋವುಗಳು ಕೂಡ ನನ್ನ ಬರಹಕ್ಕೆ ಒಂದು ರೀತಿಯಿಂದ ನೀರೆರೆದು ಬೆಳೆಸಿವೆಯೆನ್ನಬಹುದು. ಇಂಥ ನೋವುಗಳು ನನ್ನನ್ನು ಕಾಡಿ ತಲ್ಲಣಗೊಳಿಸಿರದಿದ್ದರೆ ನಾನು ಇಷ್ಟು ಗಟ್ಟಿಯಾದ ಸಾಹಿತ್ಯ ಸೃಷ್ಟಿಸುತ್ತಿದ್ದಿರಲಿಲ್ಲವೇನೋ, ನೋವು, ಸಂಘರ್ಷವಿಲ್ಲದ ಜೀವನ ಅದೆಂಥ ಜೀವನ!

ನನಗೊಗ್ಗದ ನನ್ನ ಮೊದಲ ಮದುವೆ; ನನ್ನ ಮತ್ತು ಅವನ ಹೊಂದಾಣಿಕೆಯಿಲ್ಲದೆ ಮುರಿದು ಹೋಗಿತ್ತು. ನಂತರ ನಾಗಭೂಷಣನನ್ನು ಮೆಚ್ಚಿ ಮದುವೆಯಾದದ್ದಂತೂ ಈ ಸಮಾಜ ನನ್ನನ್ನು ಅಪರಾಧಿಯ ಕಟಕಟೆಯಲ್ಲಿ ನಿಲ್ಲಿಸಿತ್ತು. ಎರಡು ಮೂರು ವರ್ಷಗಳಲ್ಲಿಯೇ ಅವನ ಬಣ್ಣ ಬಯಲಾಗ ತೊಡಗಿತ್ತು. ಮಾನಸಿಕ, ದೈಹಿಕ ಹಿಂಸೆಗಳು ಹೆಚ್ಚಾಗಿ ಸೊಂಟದ ಬೆಲ್ಟುಗಳೂ ಸಾಲುತ್ತಿರಲಿಲ್ಲ. ನಂತರ ಅವನು ಮೊದಲ ಹೆಂಡತಿಯ ಮನೆಯಲ್ಲಿ ಸತ್ತಾಗ ಮಾತ್ರ ಗೋರಿಗೆ ಮೂರು ಬೊಗಸೆ ಮಣ್ಣು ಹಾಕಿ ಋಣ ತೀರಿಸಿಕೊಂಡೆವು. ಈ ಜಾತಿ ಮತ್ತು ವೈಯುಕ್ತಿಕ ಬದುಕೇ ಬರಹಕ್ಕೆ ಕಾರಣವಾಯಿತು. (ಉಷಾ.ಪಿ.ರೈ : ಲೇಖ–ಲೋಕ4– ಮಹಿಳಾ ಸಾಹಿತ್ಯ : ಒಂದು ಆತ್ಮ ಕಥಾನಕ ಪುಟ 30–50)

1. **ಕಥನ ತಂತ್ರ ಮತ್ತು ನಿರೂಪಣಾ ವಿಧಾನ:–** ದೇವನೂರರಿಗೆ ನಂಜನಗೂಡಿನ ಭಾಷೆ, ಸಿದ್ಧಲಿಂಗಯ್ಯನವರಿಗೆ ಆಕ್ರೋಶಗಳಿಂದ ಬರುವಂತ ಮಾತುಗಳೇ ತಮ್ಮ ಕೃತಿಗಳ ಭಾಷೆಯಾದರೆ, ಗುಲ್ಬರ್ಗಾ ರಾಯಚೂರಿನ ಪ್ರಾದೇಶಿಕ ಭಾಷೆ ಗೀತಾರವರ ಕಾದಂಬರಿಯಲ್ಲಿದೆ. ಈ ಭಾಷೆಯಿಂದಲೇ ಬರೆಯಲು ಕಾರಣವೇನೆಂದು ಅವರ ಮಾತುಗಳಿಂದಲೇ ತಿಳಿಯಬಹುದು.

ಕಾದಂಬರಿಗಳನ್ನು ನಾನು ಬರೀ ನನ್ನ ಖುಷಿಗಾಗಿ ಬರೆಯಲಿಲ್ಲ. ಬದುಕುವುದಕ್ಕಾಗಿಯೂ ಬರೆಯಲಿಲ್ಲ. ನನ್ನ ಬದುಕಿಗೆ ನೌಕರಿ ಇತ್ತು. ನನ್ನ ಅನಕ್ಷರಸ್ಥ, ಅಮಾಯಕ, ಕೆಳವರ್ಗದ ಮತ್ತು ದಲಿತ ಹೆಂಗಸರ ಶೋಷಣೆಯನ್ನು, ಅವರೆದೆಯಲ್ಲಿ ಹೆಪ್ಪುಗಟ್ಟಿರುವ ಸಂಕಟವನ್ನು ಕೃತಿಗಳಲ್ಲಿ ದಾಖಲಿಸಿ, ಜನತೆಯ ಮುಂದೆ ಇಡಬೇಕೆಂಬ ಛಲದಿಂದ ಮತ್ತು ಈ ದೌರ್ಜನ್ಯಕ್ಕೆ ಕಾರಣವಾಗಿರುವವರ ಕಚ್ಚೆ ಹರಕುತನ, ಹಲ್ಕಟ್ ಗಿರಿಗಳನ್ನು ಜನರು ಅರಿಯಬೇಕೆಂಬ ಹಟದಿಂದ ಬರೆಯುತ್ತಿದ್ದೇನೆ. ನನ್ನ ಜನರ ನೋವುಗಳು ಸಾಹಿತ್ಯ ಚರಿತ್ರೆಯಲ್ಲಿ ದಾಖಲಾಗಬೇಕಾದ ಜರೂರತ್ತು ಈ ದಿನಗಳದ್ದಾಗಿದೆ. (ಬದುಕು : ಕೇಂದ್ರಸಾಹಿತ್ಯ ಅಕಾಡೆಮಿ ಪ್ರಶಸ್ತಿ ಸ್ವೀಕಾರ ಭಾಷಣದಿಂದ ತೆಗೆದುಕೊಳ್ಳಲಾಗಿದೆ)

ಸಾಹಿತ್ಯಕ ಘಟ್ಟಗಳ ಯಾವ ಬಣ್ಣವನ್ನೂ ನನ್ನ ಮುಖಕ್ಕೆ ಮೆತ್ತಿಕೊಳ್ಳದೆ ಯಾವ ಪಂಥದ ಗುರುತನ್ನೂ ನನ್ನ ಹಣೆಯ ಮೇಲೆ ಮೂಡಿಸಿಕೊಳ್ಳದೆ, ಯಾವ ಪ್ರಭಾವ ಪ್ರೇರಣೆಗಳಿಗೂ ಸಿಕ್ಕಿ ಬೀಳದೆ ನನ್ನದೇ ಸ್ವಂತಿಕೆಯ ಛಾಪಿನೊಂದಿಗೆ ಬೇಕಾಬಿಟ್ಟಿಯಾಗಿ ಬೆಳೆದು, ಮಾಲಿ(ತೋಟಗಾರ)ಯ ಕೈಚಳಕದ ಅಂಕೆಗೂ ಅಳವಡದೆ; ಅರಳಿ ನಿಂತ ಕಾಡು ಕುಸುಮ ನಾನು. ತಂತ್ರದ ಬಗ್ಗೆ ತಲೆ ಕೆಡಿಸಿಕೊಳ್ಳದೆ, ಶೈಲಿಯ ದಾಕ್ಷಿಣ್ಯಕ್ಕೆ ಕಟ್ಟು ಬೀಳದೆ, ಕಲ್ಲು ಮುಳ್ಳು, ಕಂಟಿ ಕಮರಿಗಳ ನಡುವೆ ದಾರಿ ಮಾಡಿಕೊಳ್ಳುತ್ತ, ನನ್ನ ಹಳ್ಳಿಗಳ ಮುಗ್ಧ ಹೆಣ್ಣು ಮಕ್ಕಳ ಶೋಷಣೆಯನ್ನು ಧಿಕ್ಕರಿಸುತ್ತ, ಅವರ ಸಂಕಟ, ದಾರುಣತೆಗಳಿಗೆ ದನಿ ಕೊಡುವ ಪ್ರಯತ್ನ ಮಾಡುತ್ತ ಹೊರಟಿದ್ದೇನೆ. ಸುಮಾರು ಮೂರು ದಶಕಗಳಿಂದ ನಿರಂತರವಾಗಿ ನಡೆದ ನನ್ನ ನೋವಿನ ಬರವಣಿಗೆಯನ್ನು ಇಂದು ರಾಷ್ಟ್ರಮಟ್ಟದ; ಅಕಾಡೆಮಿಯು ಗುರುತಿಸಿ ಪುರಸ್ಕರಿಸಿದೆ. ಈ ನಿಟ್ಟಿನಲ್ಲಿ ನನ್ನ ಶ್ರಮ ಸಾರ್ಥಕ ಎನ್ನಿಸುತ್ತದೆ. (ಬದುಕು : ಎರಡನೆಯ ಆವೃತ್ತಿಗೆ ನಾಲ್ಕು ಮಾತುಗಳಿಂದ ತೆಗೆದುಕೊಳ್ಳಲಾಗಿದೆ)

ಗೀತಾರವರ ಕಾದಂಬರಿಗಳಲ್ಲಿ ಮೇಲ್ನೋಟಕ್ಕೆ ಕುಡಿತ, ಹಸಿವುಗಳೇ ವಸ್ತುಗಳಾಗಿ ಕಂಡು ಬಂದರೂ ಜನಪದ ವೈಶಿಷ್ಟ್ಯತೆ ಮತ್ತು ಕೆಳವರ್ಗದ ಅದರಲ್ಲೂ ಹೆಣ್ಣಿನ ಸ್ಥಿತಿಗತಿಗಳ ವಿವರ ಇವರ ಕಾದಂಬರಿಗಳಲ್ಲಿವೆ. ಸನ್ನಿವೇಶಕ್ಕೆ ಮತ್ತು ಸಂದರ್ಭಗಳಿಗೆ ತಕ್ಕಂತೆ ಇವರ ಭಾಷೆ ಬೆಳೆಯುತ್ತಾ ಸಾಗುತ್ತದೆ. ಇವರೇ ಹೇಳುವಂತೆ ಕಥನ ತಂತ್ರ ಮತ್ತು ಶೈಲಿಗೆ ಪ್ರಾಮುಖ್ಯತೆ ನೀಡದೆ ಇವರ ಕಾದಂಬರಿಗಳ ವಸ್ತುವಿನಿಂದಲೇ ಮುಖ್ಯರೆನ್ನಿಸುತ್ತಾರೆ. ಇವರ ಎಲ್ಲಾ ಕಾದಂಬರಿಗಳು ಸಹ ಪ್ರಾದೇಶಿಕ ಭಾಷೆಯಿಂದಕೂಡಿದ್ದು, ಜನಪದ ಉಪಮೆಗಳು, ನುಡಿಗಟ್ಟುಗಳನ್ನು ಹೊಂದಿದೆ. ಹಾಗೂ ಸೂರ್ಯನ ವರ್ಣನೆಯೊಂದಿಗೆ ಪ್ರಾರಂಭವಾಗುತ್ತದೆ.

**ಹಸಿಮಾಂಸ ಮತ್ತು ಹದ್ದುಗಳು:-**

ಮೂಡಲ ದಿಕ್ಕಿನಲ್ಲಿ ತಲೆಯೆತ್ತಿ ಬೆಂಕಿಯುಂಡೆಯಂತೆ ಬಂದ ಸೂರ್ಯ ಬಿಳುಪಿಗೆ ತಿರುಗಿ ಸೊಕ್ಕೇರಿದ ಬಿಳಿ ಗೂಳಿಯಂತೆ ಗುಟುರು ಹಾಕುತ್ತ ನೀಲಿ ಆಕಾಶದ ಉದ್ದಕ್ಕೂ ಕುಣಿಯುತ್ತ ಮೆರೆದು ಕೊನೆಗೂ ಪಡುವಣಕ್ಕಿಳಿದು; ವೀರ್ಯಸ್ಖಲನ ಹೊಂದಿದ ಮುದಿಯನಂತೆ ತೇಕುತ್ತ ರಕ್ತಕಾರಿ ಸತ್ತ. ರಕ್ತ ಉಗುಳಿದ ಅವರ ಕಿರಣಗಳು ಬಾಯೊರೆಸಿಕೊಳ್ಳಲೂ ಆಗದೆ ಅವನ ಜೊತೆಗೆಯೇ ಅವನದೇ ಕುಣಿಯಲ್ಲಿ ಬಿದ್ದು ಚಡಪಡಿಸಿ ಉಸಿರು ಕಳೆದುಕೊಳ್ಳುತ್ತ ಒದ್ದಾಡಿ ಸ್ತಬ್ಧವಾದವು ಸೂರ್ಯನ ಹೆಣವನ್ನು ಮಣ್ಣು ಮಾಡಿ ಕತ್ತಲೆ ಏರಿ ನಿಂತಿತು.[1]

ಪ್ರಕೃತಿಗೆ ತಕ್ಕಂತೆ ಹರೆಯವನ್ನು ಸಮೀಕರಿಸುವ ವರ್ಣನೆ ಹೀಗಿದೆ. ಇದನ್ನು ಲಚ್ಚಿಯ ಕನಸಿನ ಸಂದರ್ಭದಲ್ಲಿ ಕಾಣಬಹುದಾಗಿದೆ. ಚಿಕ್ಕೆಗಳ ಮುಸುಕು ಬೆಳಕು ಸುತ್ತಲೂ ಆಡುತ್ತಿತ್ತು. ಕಪ್ಪನೆಯ ಕಂಬಳಿಯ ಮೇಲೆ ಮುತ್ತಿನ ರಾಶಿಯಂತೆ ಚೆಲ್ಲುವರೆದ ನಕ್ಷತ್ರ ಸಮೂಹ. ಆಗತಾನೆ ಮೈನೆರೆದು ಹರೆಯಕ್ಕೆ ಕಾಲಿಟ್ಟು ಮುಸು ಮುಸು ನಗುತ್ತ ಸುಳಿದಾಡುವ ಪಡ್ಡೆಹೆಣ್ಣುಗಳಂತಹ ಚುಕ್ಕೆಗಳು ಆಗ ತಾನೇ ಮೂಡಿ ಮೇಲೇರುತ್ತಿರುವ ಬಿಳಿ ಗೂಳಿಯಂಥ ಚಂದಿರ.[2]

ಸಮಯ (ಕಾಲ)ದ ವರ್ಣನೆ ಹೀಗಿದೆ. ಯಾರ ಕಣ್ಣೀರಿಗೂ, ವ್ಯಥೆಗೂ ಬೆಲೆ ಕೊಡದ ಸಮಯ ಸರಿಯುತ್ತಿತ್ತು. ಸಮಯಕ್ಕೆ ಮನುಷ್ಯರ ದುಃಖ-ದುಗುಡಗಳೆಡೆಗೆ ಮೊದಲಿನಿಂದಲೂ ಕುರುಡು ನೋಟ, ನಿರ್ದಾಯಿ ನಿಷ್ಕರುಣಿ ಅದು.[3]

ಯಾರ ಕಣ್ಣೀರು ಉಕ್ಕಿದರೇನು? ಸಮಯಕ್ಕೆ ಅದನ್ನೆಲ್ಲ ನೋಡುತ್ತ ಕುಳಿತಿರಲು ಕಣ್ಣಿದೆಯೇ? ಅದಕ್ಕಿರುವುದು ಬರೀ ಕಾಲುಗಳಷ್ಟೇ, ಕ್ಷಣವೂ ನಿಲ್ಲದ ನಿರಂತರ ಚಲನೆ ಅದಕ್ಕೆ.[4]

ಬೇಸಿಗೆ ಕಾಲದಲ್ಲಿ ಮಳೆ ಬರುವುದಿಲ್ಲ ನಿಜ. ಆದರೆ ಉತ್ತರ ಕರ್ನಾಟಕದ ಬಯಲು ಸೀಮೆಯ ಈ ವಿಭಾಗದಲ್ಲಿ ಹಾಗಾಗುವುದಿಲ್ಲ. ಸರ್ಫ್, ಸೋಪ್, ಪೌಡರ್ ನಲ್ಲಿ ಅದ್ದಿ ಬಗೆದು ಪ್ರೆಸ್ ಮಾಡಿ ಹರವಿಟ್ಟಂತಹ ಈ ಕಡೆಯ ಬೇಸಿಗೆಯ ತಿಳಿನೀಲ ಸ್ವಚ್ಛ ಆಗಸದಲ್ಲಿ ಒಮ್ಮಿಂದೊಮ್ಮೆಲೆ ಎಲ್ಲೆಲ್ಲಿಂದಲೋ ಕಪ್ಪು ಮೋಡಗಳು ಆನೆ ಹಿಂಡಿನಂತೆ ಗುಂಪು ಕಟ್ಟಿಕೊಂಡೇ ದಾಳಿಯಿಡುತ್ತವೆ. ಬಿರುಗಾಳಿ ಬೀಸುತ್ತದೆ. ಮೋಡಗಳ ಮೈಗೆ ಧೂಳಿನ ಫೌಡರಿನ ಲೇಪನ.[5]

ಪ್ರಕೃತಿಯೊಂದಿಗೆ ಲಚ್ಚಿಯ ಬದುಕಿನ ವರ್ಣನೆಯು ಹೀಗಿದೆ. ಲಚ್ಚಿಯ ಬಾಳಿನಲ್ಲಿಯೂ ನಡೆಯುತ್ತ ಬಂದಿರುವುದು ಹೀಗೆಯೇ ಸುಳಿವು ಸೂಚನೆ ಕೊಡದ ಮೋಡಗಳಂತೆ

ಹಾದುಬಂದು, ಅಬ್ಬರಿಸಿ ಮಳೆಯುಕ್ಕಿಸುವಂಥ ಘಟನೆಗಳೇ ಅವಳ ಬದುಕಿನಲ್ಲಿ ನಡೆಯಬಂದಿದ್ದು, ಬವಣೆಗಳು ಯಾವಾಗಲೂ ಹೀಗೆಯೇ ಅಲ್ಲವೇ? ಸುಳಿವು ಸೂಚನೆ ಕೊಟ್ಟು, ನಾವು ಬರುತ್ತಿದ್ದೇವೆ ಹುಷಾರು ಎಂದೇನಾದರೂ ಹೇಳಿ ಅವು ಬರುವುದಿದೆಯೇ? ಲಚ್ಚಿಯ ಬದುಕು ಇದಕ್ಕೆ ಹೊರತಲ್ಲ.[6]

**ಸಮಯಕ್ಕೆ ತಕ್ಕಂತೆ ಬರಗಾಲದ ವರ್ಣನೆಯು ಹೀಗಿದೆ.**

ಕುಡಿಯಲು ನೀರಿಲ್ಲ, ದುಡಿಯಲು ಕೆಲಸವಿಲ್ಲ, ಹೊಟ್ಟೆ ಬೆನ್ನಿಗಂಟಿಸಿಕೊಂಡು ಜನ ಕ್ಷಣಕ್ಕೊಮ್ಮೆ ಆಗಸ ದಿಟ್ಟಿಸಿದರು. ಅದು ನಿರಂತರವಾಗಿ ಬೇಯುವ ಬೆಂಕಿಕೊಂಡ ಬೆಂಕಿಯುಗುಳುವ ಸೂರ್ಯನ ಸುತ್ತ ನಾಲ್ಕು ಮಾರು ದೂರದಲ್ಲಿ ಕ್ಷಯರೋಗ ಪೀಡಿತ ಬಿಳಿಚಿಕೊಂಡ ಬಿಳಿ ಮೋಡಗಳು ಸಂಜೆಗೂ ಅಷ್ಟೇ. ಆಗಸವನ್ನು ತಬ್ಬಿನಿಂತ ತೊನ್ನು ಮೈಯ ಬಂಜೆ ಮೋಡಗಳು, ಕತ್ತಲೆಯಾದರೆ ಸಾಕು, ಗಂಡಸುತನ ಕಳೆದುಕೊಂಡು ಕರ್ರಗೆ ಜೋತುಬಿದ್ದ ಚಡಪಡಿಸುವ ನೀಲಿ ಬಾನು. ಹೊಟ್ಟೆಗಾಗಿ ಜನ ದೇವರ ಮೂರ್ತಿಗಳನ್ನೂ ತಂದು ಬಜಾರಿನಲ್ಲಿ ಹರಾಜಿಗೆ ಹಿಡಿದರು. ಅನ್ನ ದೇವರ ಮುಂದೆ ಅನ್ಯ ದೇವರು ಇನ್ನೆಲ್ಲಿಯದು? ಎಳೆ ಹರಯದ ಹೆಣ್ಣುಗಳ ಶೀಲ ಕಳಚಿ ಕಲಬುರ್ಗಿಯ ಮಾರ್ಕೆಟ್ ನ ಬೀದಿಬೀದಿಗಳಲ್ಲಿ ಬೆತ್ತಲಾಗತೊಡಗಿತು. ಏರು ಜವ್ವನೆಯರಾದ ಹಳ್ಳಿಯ ಮುಗ್ಧ ಹೆಣ್ಣುಗಳು ಬರೀ ಒಂದು ಹೊತ್ತಿನ ಅನ್ನಕ್ಕಾಗಿ ನಗರದ ಸಿರಿವಂತ ಕಾಮುಕ ರಣಹದ್ದುಗಳ ಖೈದಿಗಳಾದರು. ಕಚ್ಚಹರುಕರ ಕಾಲ ಕೆಳಗೆ ತಮ್ಮ ಸೆರಗು ಹಾಸಿದರು.[7]

ಈ ಲೇಖಕಿಯ ಕಾದಂಬರಿಗಳಲ್ಲಿ ವಸ್ತುವಿಗೆ ತಕ್ಕಂತೆ ವರ್ಣನೆಗಳು ಮತ್ತು ಹೈದ್ರಾಬಾದ್ ಕರ್ನಾಟಕದ ಭಾಷೆಯನ್ನು ಒಳಗೊಂಡಿರುವುದರಿಂದ ಭಾಷೆ ಒರಟಾಗಿರುವುದನ್ನು ಕಾಣಬಹುದು.

‘ಯಲ್ಲಾ ಇಟ್ಟೀನಿ, ಸುಮ್ಕರೆ ನಿನ್ನವ್ವನಾ.........ನಿಂದೊಂದು ಕಿರಿಕಿರಿ’.[8]

‘ಪಪ್ಪಿ ಹುವ್ವಾ ಇದ್ರ ಕುಡೇ ಗಂಗವತ್ತಿ..........ನನ್ ಹಾಟ್ಯಾನ ಖಂಡಾ ಕುದ್ದೇ ಇಲ್ಲ. ಅಪ್ಪ ಬಯ್ಲಕ್ಹತ್ತಾದ.’[9]

‘ಯಾಕ್ಲೇ ಭೋಸುಡಿ, ಕುಲಕರ್ಣಿ ಮಗ್ಗಲಮ ಸೋನಾ ನಹಿ ಮಾಂಗ ತಾಕ್ಯಾ ಚಲೇ ಸ್ಟೇಶನಕೊ’[10]

‘ಟೈಂ ಖತಮ್ ಹೋಗಯಾ ಹೊರಗ ನಡಿಯಪಾ’[11]

"ಭಾಡಕವು ನನ್ ಹಾಟ್ಯಾ.... ಸಾಲಿ ಕಲ್ತು ದೊಡ್ಡ ಆಫೀಸರ್ ಆಗಿ ಹಿಂತಾ ಹಲ್ಕಾ ಧಂದಾ ಮಾಡ್ತ್ಯಾ?"[12] ಎಂಬಂತಹ ಒರಟು ಬೈಗುಳಗಳಿವೆ. ಜೊತೆಗೆ Flash Back ತಂತ್ರಗಾರಿಕೆಯೂ ಇದೆ. 'ಹೆಣದ ಹೊಟ್ಟಿ ಮ್ಯಾಲೆ ಕುಡಗೀಲರೆ, ಹಾರಿಯರೆ ಇಡ್ರೋಗುಲ್ಲಿಂಗಪ್ಪ... ನಡರಾತ್ರ್ಯಾಗ ದೆವ್ವಗಳು ಬಂದು ಹೆಣಕ್ಕ ಎಬ್ಬಿಸ್ಕೊಂಡು ಹೋಗ್ತಾವ' ಎಂಬಂತಹ ಪ್ರಾದೇಶಿಕವಾದ ಜನಪದ ನಂಬಿಕೆಗಳು ಇವೆ. 'ಹದ್ದುಗೋಳ ಕಣ್ಣಿಲಿಂದ ಕೋಳಿಮರಿ ಕಾಯ್ದಂಗ' ಎನ್ನುವ ಹಳ್ಳಿಯ ಪರಿಸರದ ಬದುಕನ್ನು ನಿರೂಪಿಸಿದ್ದಾರೆ. ಪುರುಷ ಪ್ರಧಾನತೆಯ ಕ್ರೌರ್ಯತೆಯೇ ಇಲ್ಲಿನ ನಿರೂಪಣಾ ವಿಧಾನವಾಗಿದೆ ಮತ್ತು ಇಲ್ಲಿನ ಭಾಷೆ ಹಸಿಹಸಿಯಾದಂತಹ ಅನುಭವಗಳನ್ನುಳ್ಳದ್ದಾಗಿದೆ.

**ಆಸರೆಗಳು**

**ಸೂರ್ಯನ ವರ್ಣನೆಯೊಂದಿಗೆ ಈ ಕಾದಂಬರಿಯು ಪ್ರಾರಂಭವಾಗುತ್ತದೆ.**

ಕತ್ತಲೆದೆಗೆ ಚೂರಿಹಾಕಿ ಬಂದ ಸೂರ್ಯ ಪೂರ್ವ ದಿಕ್ಕಿನಲ್ಲಿ ನಿಂತು ತನ್ನ ಮೈಗೆ ಮೆತ್ತಿದ ರಕ್ತವನ್ನು ಸ್ವಲ್ಪ ಸ್ವಲ್ಪವಾಗಿ ತೊಳೆದುಕೊಳ್ಳುತ್ತ ಬೆಳಗಾಗುತ್ತಿದ್ದ ಅವನ ಸುತ್ತ ಮುತ್ತ ಮೆತ್ತಿಹರಡಿದ್ದ ನೆತ್ತರನ್ನು ಕಂಡು ಹಕ್ಕಿ ಪಕ್ಕಿಗಳು ಕಂಗಾಲಾಗಿ, ಬಾಯಿ ಬಾಯಿ ಬಡಿದುಕೊಳ್ಳುತ್ತ ಗೂಡುಬಿಟ್ಟು ಓಡತೊಡಗಿದವು.[13]

ಸೂರ್ಯ ಹಂತಹಂತವಾಗಿ ಕರಗುತ್ತಾ ನಡೆದಿದ್ದ, ಅವನು ಹುಟ್ಟುವಾಗ ಮತ್ತು ಸಾಯುವಾಗಲೆಲ್ಲ ಈ ಪೂರ್ವ ಪಶ್ಚಿಮ ದಿಕ್ಕುಗಳ ತುಂಬೆಲ್ಲ ರಕ್ತ ಯಾಕೆ ಚೆಲ್ಲುವರಿಯುತ್ತದೆಂಬ ಗುಟ್ಟು ತಾಯವ್ವನಿಗೆ ತಿಳಿದಿರಲೇ ಇಲ್ಲ ಹೊತ್ತು ಕತ್ತಲಿನ ತೆಕ್ಕೆಗೆ ನುಸುಳಿತು. ಗೌಡನ ಹೊಲದಲ್ಲಿ ದುಡಿದ ಹೆಂಗಸರೆಲ್ಲ ಕೂಲಿಯ ಜೋಳ ಹಾಕಿಸಿಕೊಂಡು ಮನೆಗೆ ಹೊರಟರು. ತಾಯವ್ವನೂ ತನ್ನ ಕೂಲಿ ಜೋಳವನ್ನೂ ಕಂಚಿಗೆಯಲ್ಲಿ ಕಟ್ಟಿಕೊಂಡು ಹೊರಟಳು ಗೌಡ ಅವಳನ್ನು ಕರೆದು ಹೇಳಿದ.[14] ಹಗಲು ರಾತ್ರಿಗಳ ರೆಕ್ಕೆ ಬಡಿಯುತ್ತ ಹಕ್ಕಿ ಹಾರುತ್ತಿತ್ತು. ನೆಲದ ಮನುಷ್ಯರ ಬದುಕು ಅದರಲ್ಲಿಯೂ ಹಾದರ, ಕಳವು, ಜಗಳ, ಹೆಡ್ಡತನಗಳಿಗೂ ಅವಕ್ಕೂ ಯಾವ ಸಂಬಂಧವೂ ಇರಲಿಲ್ಲ. ಹೊತ್ತು ಹುಟ್ಟುತ್ತಿತ್ತು, ಮುಳುಗುತ್ತಿತ್ತು ಆಗಸದ ಮನೆಯ ಮುಂದೆ ಸೂರ್ಯ ಚಂದ್ರರಿಬ್ಬರೂ ತಮ್ಮ-ತಮ್ಮ ಸರದಿಯಂತೆ ಕಾವಲು ಕಾಯುತ್ತಿದ್ದರು. ಸಮಯದ ಚಕ್ರಕ್ಕೆ ಸುತ್ತುವುದೊಂದೇ ಗೊತ್ತು.[15] ಪ್ರಕೃತಿ ವರ್ಣನೆ ಹೀಗಿದೆ. ಕತ್ತಲೆ ಕೆನೆಗಟ್ಟುತ್ತಿತ್ತು, ಬೆಳ್ಳಿ ಪುಡಿ ಚಿಮುಕಿಸಿದಂತೆ ಆಕಾಶದ ತುಂಬೆಲ್ಲ ಚುಕ್ಕೆಗಳು ಹುಟ್ಟಿ ಸಾಯುತ್ತಿದ್ದವು. ಪೂರ್ವ ದಿಕ್ಕಿನಲ್ಲೆಲ್ಲೋ

ಹುಟ್ಟಿದ ಬರಗಾಲದ ಬಡಕಲು ಚಂದಿರ, ಬೆಳದಿಂಗಳು ಹರಿಸುವಲ್ಲಿ ಸೋತು ನಿಂತಿದ್ದ ಭೂಮಿಯ ಮೇಲಿನ ಗಿಡ-ಮರಗಳೆಲ್ಲ ಬಿಮ್ಮನೆ ಬಿಗಿದುಕೊಂಡು ನಿಂತು ಭಯ ಹುಟ್ಟಿಸುತ್ತಿದ್ದವು.[16]

ಕಾಲದ ವರ್ಣನೆ ಹೀಗಿದೆ. ರಾತ್ರಿ ಬೆಳೆಯುತ್ತಿತ್ತು. ಮುಸುಮುಸು ಅಂತ ಬಲು ಸೊಕ್ಕಿನಿಂದ ಬೆಳೆಯುತ್ತಿತ್ತು ಕತ್ತಲೆ. ಯಾರು ಸಾಯಲಿ, ಯಾರು ಕೆಡಲಿ, ಈ ಕತ್ತಲೆಗೇನೂ ಫರಕ್ ಬೀಳುತ್ತಿರಲಿಲ್ಲ ಹುಟ್ಟೋ ಸಾಯೋ ಆಟಕ್ಕೆಲ್ಲ; ಕುರುಡಾಗಿ ಕಿವುಡಾಗಿ ಕತ್ತಲೆ ಬೆಳೆಯುತ್ತಿತ್ತು, ಗಟ್ಟಿಯಾಗುತ್ತಿತ್ತು, ಗಡ್ಡೆಗಟ್ಟುತ್ತಿತ್ತು.[17] ಸಮಯದ ವಾಹನಕ್ಕೆ ಒಂದೇ ರೀತಿಯ ಸ್ಪೀಡು, ನಿಖರವಾದ ಅದರ ವೇಗದ ಮಿತಿ, ಏರಿಳಿತಗಳಲ್ಲಿ ಹೆಚ್ಚು ಕಡಿಮೆಯಾಗುವುದಿಲ್ಲ ಗೇರು ಬದಲಾಯಿಸುವುದಿಲ್ಲ, ಬ್ರೇಕ್ ಅಂತೂ ಅದಕ್ಕಿಲ್ಲವೇ ಇಲ್ಲ, ಇನ್ನು ದಾರಿಯ ತುಂಬೆಲ್ಲ ಒನ್‌ವೇ ಟ್ರಾಫಿಕ್. ಅದೂ ಒಂದೇ ವಾಹನ ಓಡುವುದರಿಂದ ಅಪಘಾತಗಳ ಭಯವಿಲ್ಲ, ಅದಕ್ಕೂ ಒಂದೇ ಗತಿಯಲ್ಲಿ ಓಡುವುದೊಂದೇ ಗೊತ್ತು.[18]

ಹಗಲು-ರಾತ್ರಿಗಳ ರೆಕ್ಕೆ ಬಡಿಯುತ್ತ ಹಕ್ಕಿ ಹಾರುತ್ತಿತ್ತು. ನೆಲದ ಮನುಷ್ಯರ ಬದುಕು, ಅದರಲ್ಲಿಯೂ ಹಾದರ, ಕಳವು, ಜಗಳ ಹೆಡ್ಡತನಗಳಿಗೂ ಅದಕ್ಕೂ ಯಾವ ಸಂಬಂಧವೂ ಇರಲಿಲ್ಲ. ಹೊತ್ತು ಹುಟ್ಟುತ್ತಿತ್ತು, ಮುಳುಗುತ್ತಿತ್ತು, ಆಗಸದ ಮನೆಯ ಮುಂದೆ ಸೂರ್ಯ ಚಂದ್ರರಿಬ್ಬರೂ ತಮ್ಮ –ತಮ್ಮ ಸರದಿಯಂತೆ ಕಾವಲು ಕಾಯುತ್ತಿದ್ದರು. ಸಮಯಕ ಚಕ್ರಕ್ಕೆ ಸುತ್ತುವುದೊಂದೇ ಗೊತ್ತು.[19]

**ಈ ಕಾದಂಬರಿಯಲ್ಲಿರುವ ಗಾದೆಗಳು:**

1. ಅಳುವವನಿಗೆ ಅರವತ್ತು ಮಂದಿ ಹೆಂಡ್ರು
2. ಹೊಸ ಹೊಸದಾಗಿ ಗಂಡ ಹೊಸ್ತಿಲು ದಾಟಗೊಡುವುದಿಲ್ಲ, ಇರ ಇರುತ್ತ ಗಂಡ ಇರಗೊಡುವುದಿಲ್ಲ.
3. ಗಂಡ ಹೆಂಡಿರ ಜಗಳ ವುಂಡು ಮಲಗೋತನಕ
4. ಸತ್ತ ಮ್ಯಾಲ ಅತ್ತೋ ಕತ್ತಿ ಮೂಳಾ ಅಂತ
5. ನಾ ಇಲಾಜ್ ಶೋಕ್ಯಾ ಇಲಾಜ್ – ಉರ್ದುಗಾದೆಯಾಗಿದೆ.
6. ಹುಟ್ಟಿದ ಗುಣ ಮೆಟ್ಟಿನಿಂದ ಹೊಡೆದರೂ ಹೋಗೋದಿಲ್ಲ,
7. ಹುಟ್ಟು ಸುಳಿ ಸುಟ್ಟರೂ ಹೋಗಂಗಿಲ್ಲ.
8. ವೈರಿ ಮುಂದ ಚಂದ್ರ ಬಲಾ ಕೇಳಿದ್ದರಂತ.

ಈ ಗಾದೆಗಳ ಜೊತೆಗೆ ಇಜ್ಜತ್, ಮಸ್ತಾ, ಒಜ್ಜಿ ಮುಂತಾದ ಉರ್ದು ಪದಗಳಿವೆ, Flash Back ತಂತ್ರಗಾರಿಕೆಯಿದೆ. ಬಡತನದೊಂದಿಗೆ ಹೆಣ್ಣಿನ ನೋವು, ಗಂಡಿನ ಸಹ ಚರ್ಯದಂತೆ ಹೆಣ್ಣು ಮತ್ತು ಹೆಂಡಗಳಿಂದಲೇ ಕಾದಂಬರಿಯನ್ನು ನಿರೂಪಿಸಲಾಗಿದೆ.

**ಬದುಕು**

**ಸೂರ್ಯನ ವರ್ಣನೆ ಈ ರೀತಿಯಿದೆ.**

ಸಾಲುಗುಡ್ಡದ ನೆತ್ತಿಯ ಮೇಲೆ ಆಕಾಸಂಬೋ ಆಕಾಸದ ಮಾರಿಯೆಲ್ಲಾ ಚಾಜ ಒರೆಸಿದಂಗಾಗಿ ಕೆಂಪಗೆ ಲಾಲ್ ಲಾಲ್ ಆಗಿತ್ತು. ತಣ್ಣಗ ಆವಾಜು ಮಾಡುತ್ತ ಬೀಸಿ ಬರೋ ಅಡವಿಮ್ಯಾಲಿನ ಗಾಳಿ ಆ ಗುಡ್ಡದ ಮೈಗೆ ತಂಪೆರಚಿ, ಕೆಳಗಿಳಿದು ಸಿಂದಿಬನದ ಕಡೆಗೆ ನಡೆದಿತ್ತು. ನೋಡುನೋಡುತ್ತಿದ್ದಂಗೆ ಮುಗಿಲ ಮಾರಿಯ ಕೆಂಪಿನಲ್ಲಿ ಅಲ್ಲೀಟು ಹಳದಿ, ಇಲ್ಲೀಟು ಕೇಸರಿ, ಮತ್ತೀಟು ಬಂಗಾರ ಬಣ್ಣ ಕಲೆಸಿದಂಗಾಗಿ ಬೆಳಗು ಹಟ್ಟಿ, ಕೈಕಾಲು ಬಡಿಯುತ್ತಿತ್ತು. ಕರಿಬಿಳಿ ಮೋಡಗಳ ಸಂದಿಗೊಂದಿಯಲ್ಲಿ ಕೈಕಾಲು ಚಾಚುತ್ತ ಬೆಳೆಗು ಬಲಿಯುತ್ತ, ಕೆಳಗಿಳಿಯುತ್ತ ಗುಡ್ಡದ ಮೈಮೇಲಿನ ಗಿಡಗಳ ತಲೆಯ ಮೇಲೆ ಚಿನ್ನದ ನೀರು ಚಿಮುಕಿಸುತ್ತ ಹಂಗೇ ತುಸು ಕೆಳಜಾರಿ ಗುಡ್ಡದ ಪಾದಕ್ಕಂಟಿಕ್ಕೊಂಡೇ ಮೈತುಂಬಿಕೊಂಡು ನಿಂತಿದ್ದ ಶಿವಳ್ಳಿಯ ಮನೆ ಗುಡಿಸಲುಗಳ ನೆತ್ತಿಯ ಮೇಲೆ ಝಿಲ್ಲನೆ ಹರಿದು ಬಂದಿತ್ತು. ರಾತ್ರಿಯೆಲ್ಲ ಗುಡ್ಡದ ಗಿಡ ಮರಗಳ ಮೈಗೆ ತೆಕ್ಕೆ ಬಡಿದುಕೊಂಡು ಠಿಕಾಣಿ ಹಾಕಿದ್ದ ತರಾವರಿ ಹಕ್ಕಿ ಪಕ್ಕಿಗಳೆಲ್ಲ ಕಬಿಕಬಿ ಮಾಡುತ್ತ ಹಾರುವ ಹುನ್ನಾರು ಸುರುಮಾಡಿದವು. ಹಾರಲು ಬಾರದ ಮರಿಗಳು ಚೀಂ ಪಿ......ಚೀಂ......ಪೀ.......ಮಾಡುತ್ತ, ಗೂಡುಗಳ ತುದಿಗೆ ಮಾರಿ ಹಾಕುತ್ತ ಕಣ್ಣು ಪಿಳುಕಿಸುತ್ತಿದ್ದವು, ಪುಕ್ಕ ಬಲಿತಿದ್ದ ದೊಡ್ಡ ಹಕ್ಕಿಗಳು ಹಿಂಡುಗಟ್ಟಿಕೊಂಡು ಚಿಲಿಪಿಲಿಗುಟ್ಟುತ್ತ ಆಕಾಶದ ಎದೆಗೆ ಹಾರಿದವು.[20]

**ಬೆಳಗಿನ ವರ್ಣನೆ ಹೀಗಿದೆ.**

ಬೆಳಗಿನ ಬಣ್ಣ ಅಂಗಳ ತುಂಬಿತ್ತು. ಕೊಟ್ಟಗಿಗಿ ಹತ್ತಿನಿಂತಿದ್ದ ಬೇಯಿನ ಮರದ ಮ್ಯಾಲೆ ರಾತರಂಬೋ ರಾತರೆಲ್ಲ ಝುಂಡಾ ಊರಿದ್ದ ಹಕ್ಕಿ ಪಕ್ಕಿಗಳು ಕಚಿ ಪಿಚಿ ಮಾಡುತ್ತ ಹಾರುವ ಹುನ್ನಾರು ನಡೆಸಿದ್ದವು. ಥಳಥಳ ಹೊಳೆಯುವ ತಾಮ್ರದ ಕೊಡ, ಹಗ್ಗ ಹಿಡ್ಕೊಂಡು ಹರೆಯದ ಹೆಣ್ಣುಗಳು ಮುಂದಿನ ರಸ್ತೆಯ ಮೇಲಿಂದ ಕಿಸಣಪ್ಪ ಕುಕ್ಕಣಿಯ ಸೀನೀರಿನ ಭಾಂವಿಯ ಕಡೆಗೆ ನಡೆದಿದ್ದರು. ನೇಗಿಲು, ಗಳೇವು ಮೊದಲಾದ ಸಾಮಾನುಗಳನ್ನು ಹೊತ್ತುಕೊಂಡು, ಎತ್ತುಗಳನ್ನು

ಹೊಡೆದುಕೊಂಡು ಹೊಲಕ್ಕೆ ಹೊಂಟಿದ್ದ ನಾಟೀಕಾರ ತಿಪ್ಪ್ಯಾ ಸಿಂಗಾರದ ಹಾಡೊಂದನ್ನು ಹಾಡುತಿದ್ದನು.[21] ಮುಸ್ಸಂಜೆಯ ಸೂರ್ಯ ಹಣ್ಣು ಹಣ್ಣು ಮುದುಕನಾಗಿ, ಕೆಂಪುದೇಟಿನ ಬಾಡಿದ ಪುಂಡಿ ಹುವ್ವಿನಂಗಾಗಿ ಗುಡ್ಡದ ಕೆಳಗೆ ಕುಸಿಯುತ್ತಿದ್ದನು. ಹೊತ್ತಿರಟಗೀ ಹೊಲಕ್ಕೆ ಬಂದಿದ್ದ ಕಾಶಮ್ಮ ಕರಿ ಅಡವಿಯಲ್ಲಿ ಕಾಲೆತ್ತಿಡುತ್ತ ಸಂಜೆಯ ಸೊಬಗನ್ನು ಸವಿಯುತ್ತಿದ್ದವಳು ಹೊತ್ತು ಮುಳುಗಿದ್ದು ಕಂಡು ಮನೆಯ ಕಡೆ ಹೊಂಟು ನಿಂತಳು.[22]

ದಿನಕ್ಕೊಮ್ಮೆ ಹುಟ್ಟು ದಿನಕ್ಕೊಮ್ಮೆ ಸಾವು ಅನ್ನೋಹಂಗ ಸೂರ್ಯ ಚಂದ್ರಾ ಮರು ಹುಟ್ಟುತ್ತಿದ್ದರು...ಸಾಯುತ್ತಿದ್ದರು. ಮತ್ತೆ ಹುಟ್ಟುತ್ತಿದ್ದರು. ಹೀಂಗೆ ಹುಟ್ಟು ಸಾವುಗಳ ಕೈ ಹಿಡಿದುಕೊಂಡೇ ಮಂದಿಯ ಬದುಕು ಮುಂದೆ ಮುಂದೆ ನಡೆಯುತ್ತಿತ್ತು. ಎಲ್ಲಿಗೆ ಹೋಗಿ ತಲುಪಬೇಕು ಅನ್ನುವ ಗುರಿ ಗೊತ್ತಿರಲಿಲ್ಲವಾದರೂ ನಡೆಯುವುದೊಂದೇ ತನ್ನ ಗುರಿಯೆನ್ನುವಂತೆ ಹೊತ್ತು ನಡೆಯುತ್ತಲೇ ಇತ್ತು ತನ್ನದೇ ಗತಿಯಿಂದ![23]

**ಕಾಲದ ವರ್ಣನೆ ಹೀಗಿದೆ.**

ಯಾರು ಸಾಯಲಿ, ಕೆಡಲಿ ಸಮಯ ನಿಂತು ನೋಡಿ ನಿಟ್ಟುಸಿರುಡುತ್ತದೆಯೇ? ಕಟುಕ ಅದು! ಗಳಿಗೆತ್ತು ನಿಂತು ಹೆಣ ನೋಡಿ ಎಡ್ಡು ಹನಿ ಕಣ್ಣೀರು ಹಾಕಾ ತಾಕತ್ತಿಲ್ಲದ ನಿರ್ದಯಿ ಸಮಯ ಮುಂದೆ ಮುಂದೆ ಸರಿಯುತ್ತಲೇ ನಡೆದಿತ್ತು.[24] ಯಾರು ಸತ್ತರೇನು ಕೆಟ್ಟರೇನು, ಹುಟ್ಟು, ಸಾವಿನ ಹಂಗಿಲ್ಲದ ಸಮಯಕ್ಕೆ ಕ್ಷಣ ಕ್ಷಣಕ್ಕೂ ಮುಂದೆ ಸರಿಯುವ ಧಾವಂತ.[25]

ಸಮಯ ಸರಿಯಿತು. ದಿನಾಗಲೂ ಬೆಳಗಾಗುತ್ತಿತ್ತು. ಸಂಜೆಯಾಗುತ್ತಿತ್ತು. ಇಂದು ನಾಳೆಯಲ್ಲಿ ಕರಗುತ್ತಿತ್ತು. ಒಂದು ಸತ್ತು ಇನ್ನೊಂದು ಹುಟ್ಟುತ್ತಿತ್ತು. ಬೆಳಗು ಸತ್ತು ಸಂಜೆ ಹುಟ್ಟುತ್ತಿತ್ತು. ಸಂಜೆ ಮತ್ತು ಬೆಳಗು ಹುಟ್ಟುತ್ತಿತ್ತು. ಹಿಂಗೇ ಹುಟ್ಟು ಸಾವುಗಳ ನಡುವೆ ಬದುಕು ತೂಗುತ್ತಿತ್ತು.[26]

**ಕಾಶಮ್ಮನ ವರ್ಣನೆ ಈ ರೀತಿ ಇದೆ.**

ಕಾಶಮ್ಮನ ಮೈಯಲ್ಲಿ ಈಗ ಏರುಹರೆಯದ ಕುಣಿತ ವಯಸ್ಸಿಗೆ ತಕ್ಕಂತೆ ಕನಸು, ಕಲ್ಪನೆ, ಆಸೆ, ಬದುಕುಗಳು ಅವಳ ಸುತ್ತಾ ಮುತ್ತಾ ಕಳ್ಳಾ ಮುಳ್ಳಾ ಆಡುತ್ತ ಅವಳನ್ನು ಮೈಮರೆಯುವಂತೆ ಮಾಡುತ್ತಿದ್ದವು. ಕುಂತಲ್ಲಿ ನಿಂತಲ್ಲಿ ಅವಳು ಕನಸಿನ ಬಣ್ಣಗಳನ್ನು ಕಣ್ಣಿಗೆ ಲೇಪಿಸಿಕೊಳ್ಳುತ್ತಿದ್ದಳು. ದಿನನಿತ್ಯ ಅವಳ ಕನಸಿನಲ್ಲಿ ಬಿಳಿಬಟ್ಟೆ ಉಟ್ಟ, ಬಿಳಿಮೈಯ ಚೆಲುವ ಚೆನ್ನಿಗನೊಬ್ಬ ತಪ್ಪದೆ

ಬರಲಾರಂಭಿಸಿದ್ದ! ಅಂದು ರಾತ್ರಿ ಅವಳು ಹಾಸಿಗೆಗೆ ಮೈ ನೀಡಿದ್ದಳು. ಅದೇ 'ಆಗಿನ್ನಾ' ಜಂಪ ಹತ್ತಿ ಕಣ್ಣೆವೆ ಮುಚ್ಚಿರ್ಬೇಕು. ಇನ್ನಾ ಗಡದ್ದು ನಿದ್ದೀನೂ ಹತ್ತಿರಲಿಲ್ಲ. ಆಗಲೇ ಅವನು ಅವಳ ಸಮೀಪ ನಡೆದು ಬಂದನು......."[27]

ಆಕಾಸದ ಮೆಟ್ಟಿಲುಗಳನ್ನು ಒಂದೊಂದಾಗಿ ಇಳಿಯುತ್ತ ಅವನು ಮೂಗಿನಲ್ಲೇ ನಗುತ್ತ ಬಂದು ನಿಂತನು, ಯಾರವನು? ಜಗನ್ಮೋಯಿನಿ ಸಿನೀಮಾದ ರಾಜಕುಮಾರ ಏನು? ಹೊಯಿಂದು! ಸೇಳಾ ಆಣೆ ಅವನೇ ಖರೇ, ಅಯ್ಯಾ ತಗಿ ಆಕಾಡಿ, ಅವಾಗಿವಾಗ ರಾತ್ರಿ ಹಿಂಗೆಲ್ಲಾ ನನ್ನ ಬಲ್ಲಿ ಬರಾ ಜರೂರತ್ತು ಸಿನಿಮಾದ ಆ ರಾಜಕುಮಾರಿಗ ಯಾಕಿರ್ತದ? ತನ್ನೆಡೂಕ್ಯೆ ಚಾಚಿ ಬೆಳದಿಂಗಳಿಗೆ ಬಾಜು ಸಲಿಸಿ ಬರ್ಲಕತ್ತಾನಲ್ಲ.[28]

ಕಾಶಮ್ಮನು ಲಿಂಗರಾಜನ ಮದುವೆಯ ಸುದ್ಧಿಯನ್ನು ಕೇಳಿದಾಗ ಆಕೆಯ ವಿರಹ ಈ ರೀತಿ ಇದೆ. "ಹೆಂತಾ ಘಾತ ಮಾಡ್ದ್ಯೋ ಲಿಂಗಾರಾಜಾ............ಪಿರೀತಿ ಅಂಬೋ ಹೆಸರಿಗೇ ಮಸಿ ಹಚ್ಚಿ ಬಿಟ್ಟಲ್ಲೋ ಮಾರಾಯಾ........ನಾ ಯೇನು ನಿನಗೆ ಅನ್ಯಾಯ ಮಾಡಿದ್ದನಂತೆ ನೀ ನನಗ ಹಿಂಗ್ ಧೋಕಾ ಮಾಡ್ದ್ಯೋ ಲಿಂಗರಾಜಾ........." ಅಂತ ಅವಳ ಆಂತರ್ಯ ದುಃಖ ತೋಡಿತ್ತು. ಆಮ್ಯಾಲೆ ದಿನಗಳು ಹುಟ್ಟಿ ಹುಟ್ಟಿ ಸಾಯತೊಡಗಿದಂಗೆಲ್ಲ ಅವನ ಅವಳ ಮನದಂಗಳದಿಂದ ದೂರ ದೂರ ಸರಿಯುತ್ತ ಮರೆಯಾಗತೊಡಗಿದ್ದ.[29]

**ಎಂಬಂತಹ ವರ್ಣನೆಗಳಲ್ಲದೇ ಗಾದೆಗಳು ಸಹ ಇವೆ. ಅವುಗಳೆಂದರೆ–**

1. ಎಲ್ಲೋರ ಮನೆಯ ಒಲೆಗೆ ಮೂರೇಗುಂಡು
2. ಹರ್‍ಯಾದ ಕಾಲಕ್ಕೆ ಹಾದ್ರ ಮಾಡಿ ಮುಪ್ಪಿನ ಕಾಲಕ್ಕೆ ಆಚಾರ ಹೇಳದ್ರಂತೆ.
3. ನೂಲಿನಂಗ ಸೀರೆ ತಾಯಿಯಂತ ಮಗಳು.
4. ನಾಯಿ ಮುಟ್ಟಿದ ಮಡಕಿ ಆಗ್ತಾಳ, ಉಂಡು ಬಿಸಾಡಿದ ಪತ್ರೋಳಿಗೆ ಆಗ್ತಾಳ.
5. ಹೆಣ್ಣಿನ ನೆಲಿ, ನೀರಿನ ನೆಲಿ ತಿಳಿಂಗಿಲ್ಲಂತವ್ವ
6. ಎತ್ತು ಏರಿಗೆಳೆದರೆ ಕೋಣ ನೀರಿಗೆಳಯಿತ್ತಂತೆ.
7. ಸೂಳೀ ಪಾಪ ಸನ್ಯಾಸಿಗಿ, ಸನ್ಯಾಸಿ ಪಾಪ ಮನಿ ಮಂದಿಗೆಲ್ಲಾ.
8. ಹೆಣಾನೂ ಬಂತೂ ಹಣಾನೂ ತಂತೂ ಅಂತ.

ಗರೀಬ ಗಂಡ ಸಿಕ್ಕರೇ ಛಲೋ ಅದಾ ಮಾರಾಯ, ಸಾಲೀ ಆದೀ ಘರವಾಲೀ..., ಅರೆ! ಕ್ಯಾಲಡಕೆ ಹೈರೇ......ಬಾಪರೇ.....ಲಡಕಿ ಹೈಯಾ ಛಡಿ ಹೈ?, ಪ್ಯಾರಕಾ ದುಶಮನ್ ಹಾಯ್

ಹಾಯೇ......ಪ್ಯಾರಾಕಾದುಶ್ ಮನ್ ಯಾರ್ ಕಾ ದುಶ್ ಮನ್ ಹಾಯ್‌ಹಾ....., ಲಾಡಕಿ ಭೇಟಿ ಭಿಕಾರಿ ಚೋಟಿ, ಮಾವಸೀ......ಸಕ್ಕೂ ಮಾವಸೀ.......ಕಾಯಕರೂ ಲಾಗಲಿ ಫರಾತ ಬನೂನ?, ಆಹೇ ಜರಾಂಥಾಂಬಾಗ ಬಾಯೀ.....ಆಲೀ.....ಎಂಬಂತಹ ಉರ್ದು ಮಿಶ್ರಿತ ಭಾಷೆಯೊಂದಿಗೆ, ಕೈ ಬಿಡ್ರೆಲೆ ಹಲ್ ಕಟ್ ರಂಡೇರ್ಯಾ....ನನ್ ಕೈ ಕಿತ್ತಿ ಬಿಡ್ತಿ ರೇನ್ರೇ ಭೋಸಡೇರ್ಯಾ....ಎಂಬಂತಹ ಬೈಗುಳಗಳೊಂದಿಗೆ ಕಾಮಗಂಧಿಯಾಗಿದೆ. ಇಂತಹ ಪ್ರಾದೇಶಿಕತೆಯ ಭಾಷೆಯೊಂದಿಗೆ ಇಲ್ಲಿ ಬರುವಂತಹ ಅಡಿಗೆಗಳಾದ ಮೊಲ, ಚಿಗರೆ, ಕೋಳಿ, ಕುರಿ, ಪಾರಿವಾಳ, ಕೌಂಜು, ಮಿರಚಿ, ಭಜಿ, ಮುರುಕು, ಪಾಪಡ್, ತತ್ತಿಪಲ್ಯ ಎಲ್ಲಾ ಕಾದಂಬರಿಗಳಲ್ಲಿಯೂ ಕಂಡು ಬರುತ್ತದೆ. ಇಲ್ಲಿರುವಂತಹ ಭಾಷೆ ಪುರುಷ ಪ್ರಧಾನತೆಗೊಳಪಟ್ಟಿರುವುದೇ ಆಗಿರುವುದರಿಂದ ಭಾಷೆಯ ದೃಷ್ಟಿಯಿಂದ ಲೇಖಕಿ ಗೀತಾ ಸಮರ್ಥರೆನಿಸುವುದಿಲ್ಲ. ಏಕೆಂದರೆ ಭಾಷೆ ಸಮಾಜ ರೂಪಿಸಿರುವಂತಹ ಸಿದ್ಧಮಾದರಿಯದೇ ಆಗಿದ್ದು ದಲಿತ–ಬಂಡಾಯ ಸಾಹಿತ್ಯದಲ್ಲಿ ಅಕ್ಷರಸ್ತೆಯಾದ ಮೊದಲ ತಲೆಮಾರಿನ ಮಹಿಳಾ ಬರಹಗಾರ್ತಿಯಾಗಿರುವುದರಿಂದಲೇ ಕಥನ ತಂತ್ರ ಮತ್ತು ಶೈಲಿಯ ಬಗ್ಗೆ ತಲೆಕೆಡಿಸಿಕೊಳ್ಳುವುದಿಲ್ಲ. ಇದೇ ಇವರ ಕಾದಂಬರಿಗಳು ಯಶಸ್ವಿಯಾಗದಿರುವುದಕ್ಕೆ ಕಾರಣವಾದರೂ ವಸ್ತುವಿನ ಕಾರಣಕ್ಕಾಗಿ ನಮ್ಮ ಗಮನ ಸೆಳೆಯುತ್ತಾರೆ. ಈ ಕಾದಂಬರಿಯು Flash Back ತಂತ್ರಗಾರಿಕೆಯನ್ನು ಹೊಂದಿದೆ. ಇವರ ಭಾಷೆ ಬಾಲ್ಯ, ಯೌವ್ವನ, ಮುಪ್ಪುಗಳಿಗೆ ತಕ್ಕಂತೆ ಬಳಕೆಯಾಗುತ್ತದೆ. ಇವರ ಭಾಷೆಯಲ್ಲಿ ಸೃಜನ ಶೀಲತೆ ಎಂಬುದಿಲ್ಲ. ಗ್ರಂಥಸ್ಥ ಎನಿಸುವ ಬದಲು ಸಂಭಾಷಣೆ ಅಥವಾ ಮಾತಿನ ಶೈಲಿ ಭಾಷೆಯಲ್ಲಿದೆ. ಇದೇ ಇವರ ವೈಶಿಷ್ಟ್ಯವೂ ಆಗಿದೆ.

ತನಗೆ ಹತ್ತಿರವಾದಂತಹ ದಲಿತ ಮತ್ತು ಅದರಲ್ಲಿಯೂ ಶೂದ್ರಳಾದ ಸ್ತ್ರೀಯರನ್ನು ಪುರುಷ ಪ್ರಧಾನತೆ ನಡೆಸಿಕೊಳ್ಳುವ ಕ್ರೌರ್ಯ, ಶೋಷಣೆಗಳೇ ಕಥೆಯ ನಿರೂಪಣೆ ಆಗಿರುವುದರಿಂದ ಗಂಡು ಪ್ರಧಾನ, ಹೆಣ್ಣು ಅಧೀನ ಎಂಬ ವಿನ್ಯಾಸವೇ ಇವರ ಕಾದಂಬರಿಗಳಲ್ಲಿ ಪುನರಾವರ್ತನೆಯಾಗುತ್ತದೆ. ಪ್ರತಿಭಟನೆಯ ಪಾತ್ರಗಳನ್ನು ಪುರುಷ ಪ್ರಧಾನತೆಯಲ್ಲಿನ ಮೌಲ್ಯಗಳೇ ನಿಯಂತ್ರಿಸುವಂತ ನಿರೂಪಣೆ ಇವರ ಕಾದಂಬರಿಗಳಲ್ಲಿದೆ. ಹಸಿಮಾಂಸ ಮತ್ತು ಹದ್ದುಗಳಲ್ಲಿನ ಹಸಿಯಾದ ಭಾಷೆಗಿಂತ ಕಾಶಮ್ಮ ಮಾರ್ತಾಂಡ ಹಾಗೂ ಕಾಶಮ್ಮ ಬೆಳ್ಳಿಯರ ಪಾತ್ರಗಳಲ್ಲಿ ಲೇಖಕಿಯ ಅನುಭವದ ಮಾಗುವಿಕೆ ಇದ್ದು ಮಾನವೀಯ ಅಂತಃಕರಣಗಳೇ ತುಂಬಿವೆ ಎನ್ನಬಹುದಾಗಿದೆ.

## 2. ಸ್ತ್ರೀ ಪಾತ್ರ ಚಿತ್ರಣ

### 1. ವ್ಯವಸ್ಥೆಗೆ ವಿರೋಧ ಒಡ್ಡುವ ಮತ್ತು ಹಿಂಸೆ ಪಡುವ ಹೆಣ್ಣುಗಳು.

'ಹಸಿಮಾಂಸ ಮತ್ತು ಹದ್ದುಗಳು' ಕಾದಂಬರಿಯಲ್ಲಿ ಭಾಸಗಿ ಸೀನಿಂಗಪ್ಪನ ಮಗಳು ಸಿದ್ಧೀರಿ ನಾಗ್ಯಾನೊಂದಿಗಿನ ಸಂಬಂಧ, ಲಿಂಗಾಯಿತರ ರತ್ನ ಗಂಡಸತ್ತ ಮೇಲೆ ಆಳುಮಗ ತಿಪ್ಪಣ್ಣನೊಂದಿಗಿನ ಸಂಬಂಧ, ಕುಲಕರ್ಣಿಯ ಹೆಂಡತಿ ರಮಾಬಾಯಿಯ ಹಾದರ, ಕಾಳ್ಯಾ ಮತ್ತು ಹೀರಾಬಾಯಿಯ ಸಂಬಂಧ ವ್ಯವಸ್ಥೆಯಲ್ಲಿನ ನಿಯಮಗಳಿಗೆ ವಿರೋಧ ಒಡ್ಡುವ (ಅನೈತಿಕವಾಗಿ ಎಂಬುದು ಸರಿಯೋ ಅಲ್ಲವೋ) ಪಾತ್ರಗಳು ಅನಿಸಿದರೂ ಇರುವಂತಹ ವ್ಯವಸ್ಥೆಯೊಡನೆ ಬದುಕುತ್ತಲೇ, ವಿರೋಧ ಒಡ್ಡುತ್ತಾ, ಹಿಂಸೆ ಪಡುತ್ತಿರುವ ಪಾತ್ರವೆಂದರೆ ಲಚ್ಚಿಯದು. ತಂದೆ ತಾಯಿಯನ್ನು ಕಳೆದುಕೊಂಡು ಲಚ್ಚಿ ಕುಂಬಳ ಕಾಯಿಯ ಕಳುವನ್ನು ಹೊತ್ತು ಜೈಲಿಗೆ ಹೋದ ಮೇಲೆ ಪೋಲಿಸರಿಂದ ಅತ್ಯಾಚಾರವಾದಂತಹ ಸುದ್ಧಿಯನ್ನು ತಿಳಿದ ಕಾಶಿನಾಥನು ಆಕೆಯ ಕೈಬಿಟ್ಟು, ಬೇರೆ ಹುಡುಗಿಯ ಜೊತೆಗೆ ಮದುವೆಯಾಗಿ ಕುಲಕರ್ಣಿಯ ಖಾಸಾ ಆಳುಮಗನಾಗುತ್ತಾನೆ. ಅನಾಥಳಾದ ಲಚ್ಚಿ ಹೊಟ್ಟೆಪಾಡಿಗಾಗಿ ಸ್ತ್ರೀ ನಿಕೇತನವನ್ನು ತಲುಪಿ ಅಲ್ಲಿಯೂ ಹಲವಾರು ಶೋಷಣೆ, ನೋವುಗಳನ್ನನುಭವಿಸುತ್ತಾ ಬಸ್ಸೆಣ್ಣಿಗೆ ಖಾಯಂ ಆಗಿ ಮಾರಾಟವಾಗುತ್ತಾಳೆ. ಆ ವ್ಯಕ್ತಿಯು ಸಹ ಜೈಲಿನಲ್ಲಿದ್ದವಳೆಂಬ ಸುದ್ಧಿಯನ್ನು ತಿಳಿದು, ಗರ್ಭಿಣಿಯಾಗಿದ್ದಂತಹ ಲಚ್ಚಿಯನ್ನು ಹೊರಹಾಕುತ್ತಾನೆ. ಅವಳ ಪಾಲಿಗೆ ಬಂದಂತಹ ಎಲ್ಲಾ ಗಂಡುಗಳು ಸಹ ಹದ್ದುಗಳ ರೀತಿ ಎರಗುತ್ತಾರೆ. ಎಲ್ಲರಿಗೂ ದೇಹ ಮುಖ್ಯವಾಗುತ್ತದೆಯೇ ಹೊರತು ಆಕೆಯ ಮನಸ್ಸಲ್ಲ ಜೀವನವೂ ಅಲ್ಲ. ಈ ಎಲ್ಲಾ ಕಾರಣಗಳಿಂದಾಗಿ ತನಗಾದ ಗಂಡು ಮಗುವನ್ನು ಆಕೆ ನೀರಿನ ಕಂದರಕ್ಕೆ ಹಾಕಿ ತಾನು ಆತ್ಮ ಹತ್ಯೆಗೆ ಮುಂದಾಗುತ್ತಾಳೆ. ಯಾರೋ ಬಂದು ಕಾಪಾಡುತ್ತಾರೆ. ಕೊನೆಗೆಸಾವಿನಲ್ಲೂ ಕೂಡಾ ಮುಕ್ತಿ ಕಾಣದೆ ಐ.ಪಿ.ಸಿ 304ರ ಪ್ರಕಾರ ಜೀವಾವಧಿಶಿಕ್ಷೆಗೆ ಗುರಿಯಾಗುತ್ತಾಳೆ. ಹೃದಯ, ಮನಸ್ಸು, ಭಾವನೆಗಳಿಲ್ಲದ ಬರೀ ಲೋಹದ ಹೆಣ್ಣಾಗಿ ತನಗಾದಂತಹ ಎಲ್ಲಾ ನೋವಿನಿಂದಲೂ ಆಕೆ ಹಿಂಸೆ ಪಡುತ್ತಾಳೆ.

'ಆಸರೆಗಳು' ಕಾದಂಬರಿಯಲ್ಲಿ ತಾಯವ್ವ ಮತ್ತು ತಾಳವ್ವ ವ್ಯವಸ್ಥೆಯನ್ನು ಒಪ್ಪುತ್ತಾ ವಿರೋಧ ಒಡ್ಡುವ ಮನಸ್ಥಿತಿಯವರು ಆಗಿದ್ದಾರೆ. ತಾಯವ್ವ ಮೊದಲಗಂಡ ಸೋಡ ಚೀಟಿಯನ್ನು ಕೊಟ್ಟ ನಂತರ ಎರಡನೆಯವನನ್ನು ಮದುವೆಯಾಗುತ್ತಾಳೆ ಆದರೂ ಸ್ವಂತ ಇಚ್ಚೆಯಿಂದಲ್ಲ. ಹೆಣ್ಣುಗಂಡಿನ ವ್ಯವಸ್ಥೆಗೊಳಪಟ್ಟ ಸಮಾಜದ ರೀತಿ, ರಿವಾಜುಗಳನ್ನು ಪ್ರಶ್ನಿಸುವುದಂತೂ ಸಾಧ್ಯವೇ ಇಲ್ಲದ ಒಬ್ಬನ ಆಶ್ರಯ ತಪ್ಪಿದರೆ ಮತ್ತೊಬ್ಬನ ನೆರಳಿಗೆ

ಸರಿಯುವುದು ಅನಿವಾರ್ಯವಾಗಿ ಗಂಡನ ನೀಚತನಕ್ಕೆ, ಕೋಪ ಸಿಟ್ಟು ತಿರಸ್ಕಾರಗಳಿಂದಲೇ ಇರುವ ವ್ಯವಸ್ಥೆಗೆ ವಿರೋಧ ಒಡ್ಡುತ್ತಲೇ ತನ್ನ ಬದುಕನ್ನು ಸಾಗಿಸುತ್ತಾಳೆ. ಗೋಳಪ್ಪನ ಮೊದಲ ಹೆಂಡತಿ ಸಾಬವ್ವ ತನ್ನ ಗೆಳೆಯ ಭೀಮಶ್ಯಾನೊಂದಿಗೆ ನಾಸಿಕ್‌ಗೆ ಓಡಿ ಹೋಗುವುದರ ಮೂಲಕ ವ್ಯವಸ್ಥೆಯನ್ನು ವಿರೋಧಿಸುತ್ತಾಳೆ.

ಈ ತಾಯವ್ವನ ಮಗಳು ತಾಳವ್ವ ಅಪ್ಪ ಗಂಡ, ಮಗ ಮೂರರ ಆಶ್ರಯವೂ ಇಲ್ಲದೇ ತನ್ನ ಚಿಕ್ಕ ವಯಸ್ಸಿನಲ್ಲಿ ಕೇಳುತ್ತಿದ್ದ ಪುರಾಣವನ್ನ ತಿರಸ್ಕರಿಸಿ, ನಮ್ಮರಟ್ಟೆ ಗೋಳೇ ನನಗೆ ಆಸರೆ ಎಂದು ಕೋಲುಕುಟ್ಟುತ್ತಾಳೆ. ಆಕ್ರೋಶ ವ್ಯಕ್ತಪಡಿಸುತ್ತಾಳೆ ಮೇಲ್ವರ್ಗದ ಹೆಣ್ಣಾದ ಮೈನಾಬಾಯಿ ತಾಳಿ ಮತ್ತು ತಾಯವ್ವನ ಪರಿಸ್ಥಿತಿಯನ್ನು ನೋಡಿ ಕರುಣೆಯನ್ನ ವ್ಯಕ್ತಪಡಿಸುತ್ತಳಾದರೂ ಕೆಳವರ್ಗದವರು ಯಾರ ಹಂಗಿಗೂ ಒಳಗಾಗದೇ ತಮ್ಮ ಜೀವನಕ್ಕೆ ತಾವು ದುಡಿದು ತಿನ್ನುತ್ತಾರೆ. ಅವರಿಗೆ ಹೋಲಿಸಿದರೆ ನಾವೇ ಅಸಹಾಯಕರು ಎಂದುಕೊಳ್ಳುತ್ತಾಳೆ ಇಲ್ಲಿ ಈಕೆಯ ವೈಚಾರಿಕ ಮನಸ್ಸೇ ಇರುವ ವ್ಯವಸ್ಥೆಯ ಬಗ್ಗೆ ವಿರೋಧ ಒಡ್ಡುತ್ತದೆ ಎನ್ನಬಹುದು.

'ಬದುಕು' ಕಾದಂಬರಿಯಲ್ಲಿ ಕಾಶಮ್ಮ ಮದುವೆಯಾಗಿ ಮೂರು ವರ್ಷ ತನ್ನ ಗಂಡನಾದ ಮಾರ್ತಾಂಡನೊಂದಿಗಿದ್ದು ನಂತರ ತನ್ನ ಪ್ರಿಯಕರ ಲಿಂಗರಾಜನ ತೋಟದ ಮನೆಗೆ ಸೇರುತ್ತಾಳೆ. ಜಾತಿ, ವರ್ಗ ವ್ಯವಸ್ಥೆಯನ್ನು ಮೀರಿ, ಆದರೂ ಸಹ ವರ್ಗವ್ಯವಸ್ಥೆಯಿಂದಲೆ ಅವಳು ರಂಡೆಯಾಗುತ್ತಾಳೆಯೆ ಹೊರತು ಹೆಂಡತಿಯಾಗಲ್ಲ. ಮತ್ತೊಂದು ಪಾತ್ರವಾದ ಬೆಳ್ಳಿ ತನ್ನ ಗಂಡ ಜೈಲಿಗೆ ಹೋದ ಮೇಲೆ ತನ್ನನ್ನು ಒಲಿಸಿಕೊಳ್ಳಲು ಗೌಡ ಪ್ರಿಯತ್ನಿಸಿದರೂ ಅದಕ್ಕಾಗಿ ಮನಸ್ಸೋಲದೇ ತನ್ನ ಗಂಡ ಬರುವವರೆಗೂ ಕಾಯುತ್ತಾ ಇರುವ ವ್ಯವಸ್ಥೆಯನ್ನು ಅನುಸರಿಸಿದರೂ ಗೌಡನ ವಿಚಾರದಲ್ಲಿ ಪ್ರತಿರೋಧವನ್ನೇ ವ್ಯಕ್ತಪಡಿಸುತ್ತಾಳೆ. ಹಾಗೆಯೇ ಲಿಂಗರಾಜನ ಹೆಂಡತಿ ನೀಲಮ್ಮ ಗಂಡ-ಹೆಂಡತಿಯಾಗದೆ ಮಗುವಿಗೆ ತಾಯಿಯಾಗಿ ಇದ್ದು ಇಲ್ಲಿರುವಂತಹ ಹೆಣ್ಣುಗಳೆಲ್ಲರು ಒಂಟಿಯಾಗಿ ವ್ಯವಸ್ಥೆಯ ಅಡಿಯಲ್ಲಿ ಶೋಷಣೆಯನ್ನನುಭವಿಸುತ್ತಾ ಹಿಂಸೆ ಪಡುವವರೇ ಆಗಿದ್ದಾರೆ.

ಜೋಗಿಣಿಯಾಗಿದ್ದ ತುಳಜಾ ಹುಸೇನಪ್ಪನನ್ನು ವಿವಾಹವಾಗುವ ಮೂಲಕ, ನೀಲವ್ವ ಆತ್ಮ ಹತ್ಯೆಯನ್ನು ಮಾಡಿಕೊಳ್ಳುವ ಹಾಗೂ ಹಿರಿಯ ಜೋಗಿಣಿಯಾಗಿರುವ ನಿಂಬೆವ್ವ ವ್ಯವಸ್ಥೆಯ ಕ್ರೂರತನವನ್ನು ಹೇಳುತ್ತಾ ಜೋಗಿಣಿಯಾಗುವವರನ್ನು ನಿಯಂತ್ರಿಸುತ್ತಾ ತಮ್ಮ ವಿರೋಧದ ಜೊತೆಗೆ ಹಿಂಸೆಯನ್ನು ಪಡುತ್ತಾರೆ.

2. ವ್ಯವಸ್ಥೆಯನ್ನು ಒಪ್ಪಿ ನಡೆಯುವ ಪಾತ್ರಗಳು

'ಹಸಿಮಾಂಸ ಮತ್ತು ಹದ್ದುಗಳು" ಕಾದಂಬರಿಯಲ್ಲಿರುವಂತಹ ಶೇಕವ್ವ ಇರುವಂತ ವ್ಯವಸ್ಥೆಯನ್ನು ಅನುಸರಿಸುತ್ತಿದ್ದಾಳೆಂದು ಆಕೆಯ ಮಾತಿನಿಂದಲೇ ತಿಳಿಯುತ್ತದೆ. "ಪಾಪ....ಮುದ್ಕಿ....ಏನೂ ಕಾಣ್ಲಿಲ್ಲ. ಗಂಡಸ ಮಗನಿಗೆ ಹಡ್ದುಸೊಸೆಗೆ ಕರಸ್ಗೊಲಿಲ್ಲ. ಮಗಳಿಗೆ ಮದಿ ಮಾಡಿಕೊಟ್ಟು ಅಳ್ಯಾನ ಮಾರಿ ನೋಡ್ಲಿಲ್ಲ. ಇದೇ ಚಿಂತ್ಯಾಗೇ ಸುಟ್ಟು ಸುಟ್ಟು ಸುಣ್ಣಾ ಆಗಿತ್ತು. ಹೆಣ್ಣು ಜಿಂವಾ ಹೇಳಿ ಕೇಳಿ ಏಟಂತ ತಾಳಿತು. ಇವತ್ ಗುಟಕ್ ಅಂತು. ಲಚ್ಚಿ ಪರದೇಶಿ ಆಯ್ತು ಈಗ.."[30] ಜೊತೆಗೆ ಸ್ತ್ರೀ ನಿಕೇತನದಲ್ಲಿಯ ಸೂಪರಿಡೆಂಟ್ ಕೂಡಾ ಸ್ತ್ರೀಯರರನ್ನ ಮಾರಾಟ ಮಾಡುತ್ತಾ ಆಕ್ರಮಣ ಮಾಡುತ್ತಾ ಇರುವ ವ್ಯವಸ್ಥೆಯನ್ನು ಒಪ್ಪಿ ನಡೆಯುತ್ತಾರೆ.

'ಆಸರೆಗಳು' ಕಾದಂಬರಿಯಲ್ಲಿಯ ಗೋಳಪ್ಪನ ತಾಯಿ "ಅಂವಾಯೆಲ್ಲಾ ಬ್ಯಾಡೆಂತೇ ಅಂದವ್ವ........ ನಾವೇ ಮಾಡ್ಕೋ ಅಂದೇವು. ನಿನ್ನ ಚೆಲುವಿಕೆ ನೋಡಿ ಅವನೂ ಒಪಗೊಂಡ. ಒಂದು ಮಮ್ಮಗಾ ಹದ್ದುಕೊಟ್ಟು ಮನಿ ದೀಪಾ ಬೆಳಗ್ತಿಯಂತ ನಿನಗ ಮಾಡ್ಕೋ ಅಂದೇವು ಮಗಾ...... ನಿನ್ ರೂಪಾ ಗುಣಾ ನೋಡೆರೆ ಅಂವಾ ಹೊರಗಿನ ಬುಧ್ಧಿ ಬಿಡ್ತಾನಂತ ತಿಳ್ಕೊಂಡಿದ್ವಿ ಈಗ ನೋಡ್ದರ ಮತ್ತ ಸುರು ಆಯ್ತು"[31] ಹೇಳುತ್ತಾ ವ್ಯವಸ್ಥೆಯನ್ನ ಒಪ್ಪಿನಡೆಯುತ್ತಿದ್ದಾಳೆ. ಇದಕ್ಕೆ ತಾಯವ್ವನ ತಾಯಿಯೂ ಹೊರತಲ್ಲ.

'ಬದುಕು' ಕಾದಂಬರಿಯಲ್ಲಿನ ನಾಗವ್ವಾಯಿ, ಮಲಕವ್ವಾಯಿ, ಮಗಲವ್ವ, ಈರವ್ವರೆಲ್ಲರೂ ವ್ಯವಸ್ಥೆಯ ಪರವಾಗಿಯೇ ಇದ್ದಾರೆ. ಶಾಣಮ್ಮ ಬದುಕು ಹೇಗೆ ಬರುತ್ತದೋ ಹಾಗೆಯೇ ಎಲ್ಲದಕ್ಕೂ ಸ್ಪಂಧಿಸುತ್ತಾಳೆ. ಭರಮ್ಯಾನ ಮಗಳು ನೀಲವ್ವ ಜೋಗಿಣಿಯಾಗುವಾಗ ಮಲ್ಲವ್ವ ವಿರೋಧದ ಮಾತಾಡಿದರೂ ಸಹ ದೇವರ ಹೆಸರಲ್ಲಿ ಎಲ್ಲಿ ಕೆಟ್ಟದಾಗುತ್ತದೋ ಎಂದು ವ್ಯವಸ್ಥೆಯನ್ನೇ ಅನುಸರಿಸುತ್ತಾಳೆ.

3. ಸ್ತ್ರೀಯರ ವಿಭಿನ್ನ ಸಂಬಂಧಗಳು

ಗೀತಾರವರ ಕಾದಂಬರಿಗಳಲ್ಲಿ ಹಲವಾರು ಸ್ತ್ರೀ ಪಾತ್ರಗಳಿದ್ದು 'ಹಸಿಮಾಂಸ ಮತ್ತು ಹದ್ದುಗಳು' ಕೃತಿಯಲ್ಲಿ ಲಚ್ಚಿಯ ಅವ್ವ ಸತ್ತಾಗ ಸಮಾಧಾನ ಪಡಿಸುವ ಶೇಕವ್ವ, ಗಂಗವ್ವ ಲಚ್ಚಿಯ ಸ್ನೇಹಿತೆ ಕೆಂಚಿ, ಜೈಲಿನ ಕಾವಲುಗಾರ್ತಿ ರಂಗವ್ವ, ಸ್ತ್ರೀನಿಕೇತನದ ನಿಂಗವ್ವ ಹಾಗೂ 'ಆಸರೆಗಳು' ಕೃತಿಯ ತಾಯವ್ವನ ಸ್ನೇಹಿತೆ ಕಾಳವ್ವ, ರಾಮವ್ವಾಯಿ, ಮೈನಾಬಾಯಿ, ಕಾಶವ್ವ, ನಾಗವ್ವಾಯಿ, ಭಾಗವ್ವ, ತಾಳಿಯ ಗೆಳತಿ ಗಂಗೆ, ಗುಲ್ಲಿಂಗವ್ವ, ಶೀಲಾ, ಸೀತಾಬಾಯಿ ಮತ್ತು 'ಬದುಕು' ಕೃತಿಯ

ಜಾತಿಯನ್ನು ಮೀರಿದ ಸುಲ್ತಾನಭೀ, ಫತರೂ ಬೆಳ್ಳಿ ಮತ್ತು ಕಾಶಿ, ಮಲ್ಲವ್ವ, ಮಲಕವ್ವಾಯಿ, ನಾಗವ್ವಾಯಿ, ಕುರುಬರ ಲಕ್ಕಿ, ಕಮಲಾ, ಮಂಜುಳ, ತುಳಜಾ, ನಿಂಬೆವ್ವ, ಭಾಗವ್ವ, ರಂಗವ್ವ, ದಿಮ್ಮವ್ವ, ಸಾಬವ್ವ, ಸಂಗವ್ವ, ಸಂಬಂಧಗಳೇ ಇಲ್ಲದೇ ಕಥೆಯ ನಿರೂಪಣೆಗೆ ಎಲ್ಲರೂ ಸೇರಿ ಕಾದಂಬರಿಯನ್ನು ವಿಸ್ತರಿಸುತ್ತ ಕಷ್ಟ–ಸುಖ, ನೋವು–ನಲಿವುಗಳಲ್ಲಿ ಸಮಾಧಾನದ ಸಂತೈಸುವಿಕೆಯ ಮಾತುಗಳನ್ನಾಡುತ್ತಾರೆ. ರಕ್ತ ಸಂಬಂಧಕ್ಕಿಂತಲೂ ಮಾನವೀಯ ಸ್ನೇಹ ಸಂಬಂಧಗಳನ್ನು ವಾಸ್ತವದಲ್ಲಿ ಇವರ ಪಾತ್ರಗಳು ತೋರಿಸುತ್ತವೆ.

**ಅಡಿ ಟಿಪ್ಪಣಿಗಳು**

1. ಗೀತಾನಾಗಭೂಷಣ: ಹಸಿಮಾಂಸ ಮತ್ತು ಹದ್ದುಗಳು, ಪುಟ.1
2. ಅದೇ : ಪುಟ.24
3. ಅದೇ : ಪುಟ.55
4. ಅದೇ : ಪುಟ.71
5. ಅದೇ : ಪುಟ.74
6. ಅದೇ : ಪುಟ.74
7. ಅದೇ : ಪುಟ.45
8. ಅದೇ : ಪುಟ.7
9. ಅದೇ : ಪುಟ.13
10. ಅದೇ : ಪುಟ.50
11. ಅದೇ : ಪುಟ.55
12. ಅದೇ : ಪುಟ.63
13. ಗೀತಾನಾಗಭೂಷಣ: ಆಸರೆಗಳು, ಪುಟ.1
14. ಅದೇ : ಪುಟ.1 4
15. ಅದೇ : ಪುಟ.1 29
16. ಅದೇ : ಪುಟ.1 1
17. ಅದೇ : ಪುಟ.53–53
18. ಅದೇ : ಪುಟ.1 17
19. ಅದೇ : ಪುಟ.1 29

20. ಗೀತಾನಾಗಭೂಷಣ: ಬದುಕು, ಪುಟ.1

21. ಅದೇ : ಪುಟ.73

22. ಅದೇ : ಪುಟ.81

23. ಅದೇ : ಪುಟ.412

24. ಅದೇ : ಪುಟ.8

25. ಅದೇ : ಪುಟ.68

26. ಅದೇ : ಪುಟ.488

27. ಅದೇ : ಪುಟ.70

28. ಅದೇ : ಪುಟ.88

29. ಅದೇ : ಪುಟ.136

30. ಗೀತಾನಾಗಭೂಷಣ: ಹಸಿಮಾಂಸ ಮತ್ತು ಹದ್ದುಗಳು, ಪುಟ.9

31. ಗೀತಾನಾಗಭೂಷಣ : ಆಸರೆಗಳು, ಪುಟ.13

# ಸಮಾರೋಪ

ಗೀತಾನಾಗಭೂಷಣ ಇತ್ತೀಚಿನ ಆಧುನಿಕ ಮಹಿಳಾ ಕಾದಂಬರಿಕಾರರಲ್ಲಿ ಪ್ರಮುಖರು. ಇವರ ಹಸಿಮಾಂಸ ಮತ್ತು ಹದ್ದುಗಳು, ಆಸರೆಗಳು ಮತ್ತು ಬದುಕು ಕಾದಂಬರಿಗಳನ್ನು ಅನುಲಕ್ಷಿಸಿ, ಇವುಗಳಲ್ಲಿ ಕಂಡುಬರುವ ಪ್ರತಿಭಟನೆಯ ನೆಲೆಗಳನ್ನು ಸಾಮಾಜಿಕ ನೆಲೆ, ಲಿಂಗಾಧಾರಿತ ಪ್ರಶ್ನೆಗಳು, ಶೋಷಣೆಯ ನೆಲೆಗಳಲ್ಲಿ ಅಧ್ಯಯನ ಮಾಡಲಾಗಿದೆ.

'ಸಾಮಾಜಿಕ ನೆಲೆ'ಯಲ್ಲಿ ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆಯೇ ರೂಪಿಸಿರುವಂತಹ ವರ್ಗ, ಲಿಂಗ, ಕುಟುಂಬ, ವಿವಾಹ, ದಾಂಪತ್ಯಗಳಲ್ಲಿ ಹೆಣ್ಣನ್ನು ನಡೆಸಿಕೊಳ್ಳುವ ರೀತಿ ಮತ್ತು ಹೆಣ್ಣು ಪ್ರತಿಕ್ರಿಯೆ ನೀಡುವ ಕ್ರಮಗಳನ್ನು ಹಾಗೂ ಹೆಣ್ಣನ್ನು ತಾಯ್ತನ, ಜೋಗಿಣಿಯನ್ನಾಗಿ ವೈಭವೀಕರಿಸುವುದು, ಪ್ರಧಾನವರ್ಗ ಅಧೀನ ವರ್ಗಕ್ಕೆ ತಲೆಮಾರುಗಳಿಂದಲೂ ರೂಪಿಸಿರುವಂತಹ ನೀತಿನಿಯಮಗಳಿಗೆ, ರೀತಿ-ರಿವಾಜುಗಳಿಗೆ ಕೆಳವರ್ಗದವರ ಪ್ರತಿರೋಧವೇನು ಎಂಬುದನ್ನು ಅಧ್ಯಯನ ಮಾಡಲಾಗಿದೆ.

'ಲಿಂಗಾಧಾರಿತ ಪ್ರಶ್ನೆಗಳ'ಲ್ಲಿ ವರ್ಗ ಮತ್ತು ಲಿಂಗಗಳೇ ಅಧಿಕಾರ ಕೇಂದ್ರಗಳಾಗಿರುವುದು, ಸೃಷ್ಟಿಯಾಗುವ ಜೀವಕ್ಕೆ ಅಥವಾ ಲಿಂಗಕ್ಕೆ ಸಮಾಜ ಗಂಡು-ಹೆಣ್ಣು ಎಂದು ಸಾಂಸ್ಕೃತಿಕವಾಗಿ ರೂಪಿಸಿ ಜೈವಿಕ ಸತ್ಯವನ್ನು ಅಧೀನಗೊಳಿಸಿ ತಿಳಿವಿನ ಸತ್ಯವಾಗಿಸಿ, ಹೆಣ್ಣನ್ನು ಹೆಣ್ಣು ಎಂಬುದರಿಂದಲೇ ಅಧೀನವೆಂದು ನಂಬಿದೆ. 'ಧರ್ಮ' ಎಂಬ ಮೂಲಭೂತವಾದಿನದಿಂದ ರಕ್ಷಣೆಯನ್ನು ನೀಡುವ ನೆಪದಲ್ಲಿ ಭಕ್ಷಕನಾಗಿ ಪ್ರಧಾನ ವರ್ಗ ಮತ್ತು ಪುರುಷ ಲಿಂಗಗಳು ಹೆಣ್ಣನ್ನು ನಡೆಸಿಕೊಳ್ಳುವ ರೀತಿ ಮತ್ತು ಆ ರೀತಿಗೆ ಹೆಣ್ಣು ಪ್ರತಿಕ್ರಿಯೆ ನೀಡುವ ವಿಧಾನ ಹಾಗೂ ಭಾಷೆಗಳಲ್ಲಿನ ಗಂಡು ಹೆಣ್ಣಿನ ನೋಟ ಕ್ರಮ ಏನು ಎಂಬುದನ್ನು ತಿಳಿಸಲಾಗಿದೆ.

'ಶೋಷಣೆಯ ನೆಲೆಗಳ'ಲ್ಲಿ ಸಮಾಜ ರೂಪಿಸಿರುವಂತಹ ವರ್ಗ, ಲಿಂಗ, ಕುಟುಂಬ, ದಾಂಪತ್ಯ, ವಿವಾಹಗಳೆಲ್ಲದರಲ್ಲಿಯೂ ಹೆಣ್ಣು ಶೋಷಿತಳೇ ಆಗಿದ್ದು, ಮೇಲ್ವರ್ಗದಿಂದ ಮಾತ್ರವೇ ಹೆಣ್ಣಿನ ಶೋಷಣೆಯಾಗುತ್ತಿಲ್ಲ. ಅದರ ಜೊತೆಗೆ ತನ್ನ ವರ್ಗದವನೇ ಆದ ಪುರುಷನಿಂದಲೂ ಆಕೆ ಶೋಷಿತಳಾಗಿದ್ದಾಳೆ. ಸ್ತ್ರೀಗೆ ಮಾತ್ರವೇ ಶೋಷಣೆಯಲ್ಲ, ಪುರುಷನು ಅಧೀನ ವರ್ಗದಿಂದ ಶೋಷಿತನಾಗಿದ್ದಾನೆ. ಗಂಡಿನಿಂದ ಮಾತ್ರವೇ ಹೆಣ್ಣು ಶೋಷಣೆಗೊಳಗಾಗುತ್ತಿಲ್ಲ, ಅದರ ಜೊತೆಗೆ ಹೆಣ್ಣಿನಿಂದಲೂ ಹೆಣ್ಣು ಶೋಷಿತಳಾಗಿದ್ದಾಳೆ. ಏಕೆಂದರೆ ಪುರುಷ ಪ್ರಧಾನತೆಯ ಮನಸ್ಸು ಹೆಣ್ಣಿನಲ್ಲಿ

ಬೇರೂರಿರುವುದರಿಂದಲೇ ಆಗಿದೆ. ಕೆಳವರ್ಗದ ಹೆಣ್ಣು ಅಷ್ಟೇ ಅಲ್ಲ, ಮೇಲ್ವರ್ಗದ ಹೆಣ್ಣು ಸಹ ಶೋಷಣೆಯನ್ನು ಅನುಭವಿಸುತ್ತಿದ್ದಾಳೆ. ಸಮಾಜ ಹೆಣ್ಣನ್ನು ಪ್ರತಿನಿಧೀಕರಣಗೊಳಿಸಿರುವಂತಹ ಅಂಶಗಳೇ ಆಕೆಯ ಶೋಷಣೆಗೆ ಕಾರಣಗಳಾಗಿವೆ. ಇಷ್ಟೆಲ್ಲಾ ಶೋಷಣೆಗೊಳಗಾಗುತ್ತಲೇ ಇರುವಂತಹ ಹೆಣ್ಣಿನ ಪ್ರತಿಭಟನೆ ಅಳು, ನಗು, ಮೌನವೇ ಆಗಿದೆ. ವ್ಯವಸ್ಥೆಯನ್ನು ಒಪ್ಪಿ ನಡೆಯುವಂತದ್ದು ಪ್ರತಿಭಟನೆ ಆಗಿದೆಯೇ ಎಂಬುದನ್ನು ಚರ್ಚಿಸಲಾಗಿದೆ.

'ಬರಹದ ವಿಶಿಷ್ಟತೆಯಲ್ಲಿ' ವೈಯಕ್ತಿಕ ಜೀವನ ಬರಹಕ್ಕೆ ಪ್ರೇರಣೆಯಾದ ರೀತಿ ಹಾಗೂ ಕೆಳವರ್ಗದ ಜನರ ಬದುಕೇ ಇವರ ಸಾಹಿತ್ಯದ ವಸ್ತು ಏಕಾಯಿತು ? ಈ ಮೂರು ಕಾದಂಬರಿಗಳಲ್ಲಿರುವಂತಹ ಕಾಲ, ವರ್ಣನೆಗಳು, ಜನಪದೀಯ ಉಪಮೆಗಳು, ಗಾದೆಗಳು ಹಾಗೂ ಫ್ಲಾಷ್‌ಬ್ಯಾಕ್ ತಂತ್ರಗಾರಿಕೆ, ಕಾಮ, ಹಸಿವು, ಕುಡಿತಗಳೇ ನಿರೂಪಣಾ ಕ್ರಮವಾಗಿರುವುದನ್ನು ಗಮನಿಸಲಾಗಿದೆ. ದಲಿತ ಬಂಡಾಯದ ಅಥವಾ ಸ್ತ್ರೀವಾದಿ ನೆಲೆಯ ಹಿನ್ನೆಲೆಯಲ್ಲಿನ ಅಧ್ಯಯನ ಒಂದು ಪಾರ್ಶ್ವಿಕ ಮಾತ್ರವೇ ಆಗುತ್ತದೆ. ಆದ್ದರಿಂದಾಗಿ ಬಡತನ ಮತ್ತು ಲಿಂಗರಾಜಕಾರಣ ಎರಡೂ ಬೆರೆತ ತತ್ವವಾದ ಸಮಾಜೋ-ಸಾಂಸ್ಕೃತಿಕ ನೆಲೆಯಲ್ಲಿ ಇವರ ಅಧ್ಯಯನ ಅನಿವಾರ್ಯವೆಂಬುದರಿಂದಾಗಿ ಇದೇ ಈ ಅಧ್ಯಯನದ ವೈಧಾನಿಕತೆಯಾಗಿದೆ.

'ಹಸಿಮಾಂಸ ಮತ್ತು ಹದ್ದುಗಳು' ಕೃತಿಯಲ್ಲಿ ಊಳಿಗಮಾನ್ಯದ ಕ್ರೌರ್ಯತೆಯೇ ಹೆಚ್ಚಾಗಿದ್ದು ಹೆಣ್ಣನ್ನು ಆಟಿಕೆಯ ವಸ್ತು ಎಂಬಂತೆಯೇ ಪರಿಗಣಿಸಲಾಗಿದೆ. 'ಆಸರೆಗಳು' ಕೃತಿಯಲ್ಲಿ ಅಪ್ಪ, ಗಂಡ, ಮಗನ ಆಶ್ರಯವನ್ನು ತೊರೆದು ತನಗೆ ತಾನೇ ಆಸರೆ ಎಂದು ಸಮಾಜ, ಲಿಂಗತಾರತಮ್ಯದ ನೆಲೆಗಳಿಂದ ಆಕೆ ಮೇಲೆದ್ದು ಪ್ರತಿಭಟಿಸುವ, ಮುಖಾಮುಖಿಯಾಗುವ ಮನಸ್ಥಿತಿಯಿದ್ದರೂ ಶೋಷಣೆಯನೆಲೆ ಹೆಣ್ಣನ್ನು ಮತ್ತೆ ಮೇಲಕ್ಕೇಳಲಾರದ ಉಸುಕಿನಲ್ಲಿಯೇ (ಮರಳು) ನಿಯಂತ್ರಿಸುತ್ತದೆ. ಗೀತಾನಾಗಭೂಷಣರ ಕಾದಂಬರಿಗಳು ಶುದ್ಧ ಸಾಹಿತ್ಯಕತೆಯನ್ನು ಮೀರಿ ಸಮಾಜೋ ಸಾಂಸ್ಕೃತಿಕ ನೆಲೆಯಲ್ಲಿ ದಲಿತ ಪ್ರಜ್ಞೆಯುಳ್ಳ ಸ್ತ್ರೀ ಸಂವೇದನೆಗಳನ್ನು ಒಳಗೊಂಡಿದೆ. ಮಹಿಳೆ ಬರೆದಿದ್ದು, ಮಹಿಳಾ ಪಾತ್ರ ಚಿತ್ರಣಗಳಿದ್ದು, ಮಹಿಳೆಯೇ ಕೇಂದ್ರವಾಗಿರುವುದರಿಂದ ಗೀತಾರವರ ಕಾದಂಬರಿಗಳು ಮಹಿಳಾ ಸಾಹಿತ್ಯ ಚರಿತ್ರೆಯ ತಳಹದಿಯಾಗುತ್ತವೆ.

ಈ ಮೂರು ಕಾದಂಬರಿಗಳ ರಚನೆಗೆ ಒಂದು ಕೃತಿಗಿಂತ ಮತ್ತೊಂದು ಕೃತಿಗೆ ಕಾಲದ ಅಂತರಗಳಿದ್ದರೂ ಸಹ ಕಥಾವಸ್ತು ಒಂದೇ ಆಗಿದೆ. ಹಸಿಮಾಂಸ ಮತ್ತು ಹದ್ದುಗಳು

ಕಾದಂಬರಿಯಲ್ಲಿ ಹಸಿ ಹಸಿಯಾದ ಅನುಭವಗಳೇ ಇದ್ದು ಪುರುಷ ಆಕ್ರಮಣಕಾರಿಯೆಂಬುದನ್ನು ಹೇಳುತ್ತದೆ. ಬದುಕು ಕೃತಿಯಲ್ಲಿ ಆಕ್ರಮಣವನ್ನು ಮೀರಿದಂತಹ ಮಾನವೀಯ ಸಂಬಂಧಗಳನ್ನು ಕಾಶಮ್ಮ ಮತ್ತು ಮಾರ್ತಾಂಡರ ಪಾತ್ರಗಳ ಮೂಲಕ ಕಟ್ಟಿಕೊಡುತ್ತದೆ. ಬದುಕಿನಲ್ಲಿ ಹೇಳದೇ ಕೇಳದೇ ಬರುವಂತಹ ವೈವಿಧ್ಯತೆ, ವೈಚಿತ್ರತೆ ಹಾಗೂ ವೈರುಧ್ಯತೆಗಳ ಹಾಗೆ ಬದುಕು ಕಾದಂಬರಿಯಲ್ಲಿನ ಪಾತ್ರಗಳು ಒಂದಕ್ಕೊಂದು ಸಂಬಂಧವೇ ಇಲ್ಲದೇ ಕಥೆಯನ್ನು ವಿಸ್ತಾರ ಮಾಡುತ್ತವೆ.

ಇಡೀ ಸಮಾಜವೇ ಪುರುಷ ಪ್ರಧಾನವಾಗಿರುವುದರಿಂದ ಕೆಲವು ಬರಹಗಾರರಲ್ಲಿ ಪ್ರಜ್ಞಾಪೂರ್ವಕವಾಗಿಯೋ ಅಥವಾ ಅಪ್ರಜ್ಞಾಪೂರ್ವಕವಾಗಿಯೋ ಪುರುಷ ಪ್ರಧಾನತೆಯ ಮನೋಭೂಮಿಕೆಯಿರುತ್ತದೆ. ಇದಕ್ಕೆ ಗೀತಾರವರ ಕೃತಿಗಳು ಹೊರತಲ್ಲವೆನಿಸುತ್ತದೆ. ಒಂದು ಕಾಲಘಟ್ಟದಲ್ಲಿನ ಹೆಣ್ಣಿನ ಸ್ಥಾನಮಾನವನ್ನೆ ಕುರಿತಾದ ಚರ್ಚೆ ನಡೆಸುತ್ತ ಸಮಾಜದ ಸಿದ್ಧ ಮಾದರಿಯನ್ನೇ ಕುರಿತಾದ ವಸ್ತು ವಿಷಯ ಕಾದಂಬರಿಯಾಗಿರುವುದರಿಂದ ಹೇಳಿಕೆಗಳು ಮತ್ತು ಘೋಷಣೆಗಳಾಗಿಯೇ ಉಳಿಯುತ್ತವೆ.

'ಹಸಿಮಾಂಸ ಮತ್ತು ಹದ್ದುಗಳ'ಲ್ಲಿ ಲಚ್ಚಿ ಗಂಡು ಮಗುವನ್ನೇ ವಿರೋಧಿಸಿದರೆ 'ಧುಮ್ಮಸ್ಸು' ಕಾದಂಬರಿಯ ಸೋನಿ ಗಂಡು ಮಗುವನ್ನು ಬೆಳೆಸುತ್ತಾಳೆ. ಹಾಗೆಯೇ ಬದುಕು ಕಾದಂಬರಿಯ ಬೆಳ್ಳಿ ಇರುವ ವ್ಯವಸ್ಥೆಯನ್ನು ಅನುಸರಿಸಿದರೆ, ಕಾಶಮ್ಮ ವ್ಯವಸ್ಥೆಯನ್ನು ವಿರೋಧಿಸಿದರು ಪಶ್ಚಾತ್ತಾಪ ಪಡುತ್ತಾಳೆ. ಒಪ್ಪುವ ಹಾಗೂ ವಿರೋಧಿಸುವಂತಹ ಎರಡೂ ದೃಷ್ಟಿಕೋನಗಳಿರುವ ಈ ಲೇಖಕಿಯಲ್ಲಿ ಪುರುಷ ಪ್ರಧಾನತೆಯಿಂದ ಬಿಡುಗಡೆಯಾಗಬೇಕೆಂಬ ಮನಃಸ್ಥಿತಿ ಒಂದು ಕಡೆಯಾದರೆ ಅದನ್ನು ಮೀರಲಾಗದು ಎಂಬ ದೃಷ್ಟಿಕೋನವೂ ಇದೆ. ಇದು ಗೀತಾರವರ ದ್ವಂದ್ವತೆಗೆ ನಿದರ್ಶನವಾಗಿದೆ.

ಗೀತಾ ನಾಗಭೂಷಣರ ಸಮಕಾಲೀನ ಲೇಖಕಿಯರಾದಂತಹ ವೀಣಾಶಾಂತೇಶ್ವರ ರವರಿಗೆ ಸಿದ್ಧ ಹೆಣ್ಣಿನ ಮಾದರಿಗಳನ್ನು ಮುರಿದು ಹೊಸ ಹೆಣ್ಣನ್ನು ಕಟ್ಟುವ ಸಾಹಸ ಧೈರ್ಯಗಳಿವೆ. 'ವೈದೇಹಿ'ಯವರ ಕೃತಿಗಳಲ್ಲಿ ಆಧುನಿಕ ಮಾದರಿಯ ಸ್ಥಿತ್ಯಂತರಗಳ ಪ್ರಯೋಗಗಳಿವೆ. ಗೀತಾರವರ ಕಾದಂಬರಿಗಳಲ್ಲಿ ಹೆಣ್ಣನ್ನು ವಸ್ತುವಾಗಿ ಮಾತ್ರವೇ ಬಳಸಿಕೊಳ್ಳುವ ವ್ಯವಸ್ಥೆಯಲ್ಲಿನ ಆಸಕ್ತಿಯನ್ನು, ವಿದ್ಯಾವಂತ ಪಾತ್ರಗಳಿದ್ದರೂ ಯಶಸ್ವಿಯಾಗಿಸದೇ ಬೌದ್ಧಿಕ ನೆಲೆಯನ್ನು ಮತ್ತು ಸ್ವಪ್ರಜ್ಞೆಯ ನಿಲುವನ್ನು ನಿರಾಕರಿಸಿ ದೈಹಿಕ ನೆಲೆಯನ್ನು ಒಪ್ಪುವ ವಿನ್ಯಾಸವಿದೆ.

ಇವು ಹೊಸ ಕ್ರಮಗಳಲ್ಲ. ವ್ಯವಸ್ಥೆ ಸತತವಾಗಿ ಹೆಣ್ಣನ್ನು ಅಧೀನವಾಗಿ ಉಳಿಸಲು ಮಾಡಿಕೊಂಡಿರುವ ದಾರಿಗಳಾಗಿವೆ. ತನ್ನ ಬದುಕನ್ನು ಕಟ್ಟಿಕೊಡುವ ಸಾಮರ್ಥ್ಯ ಇದ್ದರೂ ಅಸಹಾಯಕತೆಯಿಂದ ಪುರುಷನೊಂದಿಗೆ ಅನುಸಂಧಾನ ಮಾಡುವುದು, ತನ್ನ ಅಸ್ತಿತ್ವವನ್ನು ಕಳೆದುಕೊಂಡು ಮೂಲಭೂತವಾಗಿ ಬದುಕಿನಲ್ಲಿ ದಾರುಣಶಕ್ತಿ ಇಲ್ಲದ್ದನ್ನು ಗುರುತಿಸಿಕೊಳ್ಳುವಲ್ಲಿ ಗೀತಾರವರಿಗೆ ಆಸಕ್ತಿ ಇದೆ.

ಗೀತಾರವರ ಕಾದಂಬರಿಗಳಲ್ಲಿ ಮೇಲ್ನೋಟಕ್ಕೆ ಸ್ತ್ರೀ ಮತ್ತು ದಲಿತ ಬೇರೆ ಬೇರೆಯಲ್ಲ, ಇಬ್ಬರೂ ಶೋಷಿತರೇ ಎನಿಸುತ್ತದೆ. ಬಾಲ್ಯವಿವಾಹಗಳು ನಡೆಯುತ್ತಿದ್ದ ಕಾಲದಲ್ಲಿ ಎದುರಾಗುತ್ತಿದ್ದ ಸಮಸ್ಯೆಗಳು ಒಂದು ರೀತಿಯದಾದರೆ, ಸುಧಾರಣೆಯ ಹೆಸರಲ್ಲಿ ವಿವಾಹದ ವಯಸ್ಸನ್ನು ಮುಂದೂಡಿದ್ದರ ಫಲವಾಗಿ ಇನ್ನು ಬಹು ರೀತಿಯ ಸಮಸ್ಯೆಗಳು ಕಾಣುತ್ತಿವೆ. ಪ್ರಸ್ತುತದಲ್ಲಿ ಹೆಣ್ಣಿನ ಶೋಷಣೆಯ ವಿಧಾನವೇ ಬೇರೆ ಬೇರೆಯದಾಗಿದೆ. ಹೆಣ್ಣಿನ ಪ್ರಶ್ನೆ ಹೆಚ್ಚು ಆಳ ಮತ್ತು ಸೂಕ್ಷ್ಮವಾಗುತ್ತ ಬಹುಮುಖಿಯದಾಗಿರುವುದು ಆಗಿದ್ದು ಗೀತಾರವರು ಹೇಳುವ ಸಿದ್ಧ ಮಾದರಿಯ ಶೋಷಣೆಯನ್ನು ಮೀರಿ ಹೆಚ್ಚು ಹೆಚ್ಚು ಸಂಕೀರ್ಣವಾಗುತ್ತಿದೆ.

ದೇವನೂರರ ಕೃತಿಗಳು ಅಮೂರ್ತತೆಯಲ್ಲಿ ವಾಸ್ತವವನ್ನು ಕಟ್ಟುತ್ತಾ ಹೋದಂತೆ, ಗೀತಾರವರ ಕಾದಂಬರಿಗಳಲ್ಲಿ ಮೂರ್ತತೆಯಲ್ಲಿ ಕಲ್ಪನೆಗಳಿದ್ದು ವಾಸ್ತವವನ್ನು ಹೇಳುತ್ತಲೇ ಈ ವಾಸ್ತವತೆಯನ್ನು ಬಿಟ್ಟು ಬೇರೊಂದು ಲೋಕ ಇಲ್ಲವೇನೋ ಎನಿಸುತ್ತದೆ. ಒಟ್ಟು ಬರವಣಿಗೆಯಲ್ಲಿ ಹೆಣ್ಣಿನ ಬದುಕಿನ ಎಲ್ಲಾ ಆಯಾಮಗಳನ್ನು ಚರ್ಚೆ ಮಾಡುತ್ತಲೇ ಒಂದೊಂದು ಆಯಾಮಗಳು ಹೇಗೆ ಪಟ್ಟ ಭದ್ರವ್ಯವಸ್ಥೆಯ ನಿಯಂತ್ರಣಕ್ಕೆ ಒಳಗಾಗಿವೆ ಎನ್ನುವುದನ್ನು ಶೋಧಿಸುವುದರಲ್ಲಿಯೇ ಆಸಕ್ತವಾದದ್ದು ಆಗಿದೆ. ವಸ್ತುವಿನ ಜೊತೆಗೆ ಝೋಪಡ ಪಟ್ಟಿಯ ಜೀವನ ಕ್ರಮವನ್ನು ನಿಸ್ಸಂಕೋಚವಾಗಿ ಅಭಿವ್ಯಕ್ತಿಸುವ ಗೀತಾನಾಗಭೂಷಣರನ್ನು ದಲಿತ–ಬಂಡಾಯದ ಶಕ್ತ ಬರಹಗಾರ್ತಿ ಎಂದರೆ ಅತಿಶಯೋಕ್ತಿಯಾಗಲಾರದು.

# ಅನುಬಂಧ

**ಗೀತಾನಾಗಭೂಷಣರ ಪರಿಚಯ**

ಹುಟ್ಟು : ಗುಲ್ಬರ್ಗಾ ಜಿಲ್ಲೆಯ ಸಾವಳಗಿ ಗ್ರಾಮದಲ್ಲಿ 25 ಮಾರ್ಚ್ 1942

ವಿದ್ಯಾಭ್ಯಾಸ : ಎಂ.ಎ., ಬಿ.ಎಡ್.

ವೃತ್ತಿ : ನಿವೃತ್ತ ಪ್ರಾಂಶುಪಾಲರು, ಶ್ರೀನಗರೇಶ್ವರ ಸಂಯುಕ್ತ ಕಿರಿಯ ಮಹಾವಿದ್ಯಾಲಯ, ನೆಹರು ಗಂಜ್, ಗುಲ್ಬರ್ಗಾ

ತಾಯಿಯ ಹೆಸರು : ಶರಣಮ್ಮ

ತಂದೆಯ ಹೆಸರು : ಶಾಂತಪ್ಪ

ಚಲನಚಿತ್ರ : 'ಹೆಣ್ಣಿನ ಕೂಗು' ಎಂಬ ಹೆಸರಿನಲ್ಲಿ ಹಸಿಮಾಂಸ ಮತ್ತು ಹದ್ದುಗಳು ಕಾದಂಬರಿ ಚಲನಚಿತ್ರವಾಗಿದೆ.

ಕಿರುತೆರೆಕಂಡ ಕೃತಿಗಳು : 1.ಜೋಗಿಣಿ, 2.ಅವ್ವ, 3.ಸತ್ತ ಹೆಣ್ಣಿನ ಸುತ್ತ 4. ಜೀವನಚಕ್ರ, 5.ನೀಲಗಂಗಾ

**ಉಲ್ಲೇಖನಾರ್ಹ ಸದಸ್ಯತ್ವ:**

1. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಸದಸ್ಯತ್ವ (1992–1995)
2. ಡಾ॥ ಶಿವರಾಮ ಕಾರಂತ ಪ್ರಶಸ್ತಿ ಆಯ್ಕೆ ಸಮಿತಿಯ ಸದಸ್ಯತ್ವ (1992)
3. ಕನ್ನಡ ಪುಸ್ತಕ ಪ್ರಾಧಿಕಾರದ ಸದಸ್ಯತ್ವ (1994–1995)
4. ಗುಲಬರ್ಗಾ ವಿಶ್ವವಿದ್ಯಾಲಯದ ಸೆನೆಟ್ ಸದಸ್ಯತ್ವ (1980–1985)
5. ಚಲನಚಿತ್ರ ಪ್ರಶಸ್ತಿ ಆಯ್ಕೆ ಸಮಿತಿ ಸದಸ್ಯತ್ವ, (2000–2001)

**ಪ್ರಶಸ್ತಿ–ಪುರಸ್ಕಾರಗಳು**

1. 'ಆಘಾತ' ಕಾದಂಬರಿಗೆ ಕನ್ನಡ ಸಾಹಿತ್ಯ ಪರಿಷತ್ತಿನ 'ಮಲ್ಲಿಕಾ ಪ್ರಶಸ್ತಿ' (1983)
2. 'ನೋವು' ಕಾದಂಬರಿಗೆ ಮಾರ್ದನಿ ಪತ್ರಿಕೆ ಏರ್ಪಡಿಸಿದ್ದ ಕನ್ನಡ ಕಾದಂಬರಿ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ.
3. ಗುಲಬರ್ಗಾ ವಿಭಾಗ ಮಟ್ಟದ ಉತ್ತಮ ಉಪನ್ಯಾಸಕಿ ಪ್ರಶಸ್ತಿ (1996)
4. 'ಧಮ್ಮಸು' ಕಾದಂಬರಿಗೆ ಸಿರಿವಾರದ ಉಮಾಪತಿ ಚುಕ್ಕಿ ಪ್ರತಿಷ್ಠಾನ, ರಾಯಚೂರು ಪ್ರಶಸ್ತಿ(1995)

5. ಗುಲಬರ್ಗಾದ ಎಸ್.ಆರ್.ಪಾಟೀಲ್ ಪ್ರತಿಷ್ಠಾನದ ಸಾಹಿತ್ಯ ಪ್ರಶಸ್ತಿ (1998)
6. 'ದಂಗೆ' ಕಾದಂಬರಿಗೆ ಸಾಹಿತ್ಯ ಪರಿಷತ್ತಿನ ದತ್ತಿ ಪ್ರಶಸ್ತಿ (1998)
7. ಕಾಯಕ ರತ್ನ ಪ್ರಶಸ್ತಿ, ಮಹಾಂತ ಜ್ಯೋತಿ ಪ್ರತಿಷ್ಠಾನ (2001)
8. ಕನ್ನಡ ಸಾಹಿತ್ಯ ಪರಿಷತ್ತಿನ ಬಿ.ಸರೋಜಾದೇವಿ ಪ್ರಶಸ್ತಿ (2001)
9. ಕರ್ನಾಟಕ ಲೇಖಕಿಯರ ಸಂಘದ ಅನುಪಮ ಪ್ರಶಸ್ತಿ (2005)
10. ಹಂಪಿ ವಿಶ್ವವಿದ್ಯಾಲಯದ 'ನಾಡೋಜ ಪ್ರಶಸ್ತಿ' (2004)
11. ಗುಲಬರ್ಗಾ ವಿಶ್ವವಿದ್ಯಾಲಯದಿಂದ ಗೌರವ ಡಾಕ್ಟರೇಟ್ ಪ್ರಶಸ್ತಿ (2008)
12. ಧರ್ಮಸ್ಥಳದ ಸಾಹಿತ್ಯ ಪ್ರಶಸ್ತಿ (2007)
13. ಆಳ್ವಾಸ್ ನುಡಿಸಿರಿಯ ಸಾಹಿತ್ಯ ಪ್ರಶಸ್ತಿ (2006)
14. ಸೀತಾಸುತ ಸಿದ್ದೇಗೌಡ ಸ್ಮಾರಕ ಸಾಹಿತ್ಯ ಪ್ರಶಸ್ತಿ ಮಂಡ್ಯ (2007)
15. ಆರ್ಯಭಟ ಪ್ರಶಸ್ತಿ (2005)

**16. ಬದುಕು ಕಾದಂಬರಿಗೆ**

1. ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (2005)
2. ಮಾಣಿಬಾಯಿ ಪಾಟೀಲ ಪ್ರಶಸ್ತಿ ಕಲಬುರ್ಗಿ (2001)
3. ಗೊರೂರು ಸಾಹಿತ್ಯ ಪ್ರಶಸ್ತಿ (2001)
4. ಸರ್.ಎಂ.ವಿಶ್ವೇಶ್ವರಯ್ಯ ಸಾಹಿತ್ಯ ಪ್ರಶಸ್ತಿ (2002)

**17. ರಾಜ್ಯ ಪ್ರಶಸ್ತಿಗಳು**

1. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ (1998)
2. ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ (1998)
3. ಕರ್ನಾಟಕ ಸರ್ಕಾರದ ದಾನ ಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿ (2002)

**ಕೃತಿ ಸೂಚಿ**

| | |
|---|---|
| 1. ತಾವರೆಯ ಹೂವು | 1968 |
| 2. ಚಂದನದ ಚಿಗುರು | 1969 |
| 3. ಮಹಾಮನೆ | 1970 |
| 4. ಮರಳಿನ ಮನೆ | 1971 |
| 5. ಸಪ್ತವರ್ಣದ ಸ್ವಪ್ನ | 1973 |
| 6. ಮಾಪುರ ತಾಯಿಯ ಮಕ್ಕಳು | 1978 |
| 7. ಹಸಿಮಾಂಸ ಮತ್ತು ಹದ್ದುಗಳು | 1978/1998 |

8. ಆಘಾತ 1980
9. ಅವಾಂತರ 1982
10. ಚಿಕ್ಕಿಯ ಹರೆಯ ದಿನಗಳು 1983
11. ಬದಲಾಗುವ ಬಣ್ಣಗಳು 1984
12. ನೀಲಗಂಗಾ 1986
13. ಮೋಹ್ವಾ 1986
14. ಪ್ರೀತಿಸಿದ್ದು ನಿನ್ನನ್ನೇ 1983
15. ನಿನ್ನ ತೋಳುಗಳಲ್ಲಿ 1987
16. ನಿನ್ನೊಲವು ನನಗಿರಲಿ 1987
17. ಸವತಿ ಶ್ರೀಗಂಧ 1988
18. ನನ್ನ ನಿನ್ನ ನಡುವೆ 1992
19. ಚೈತ್ರದ ಹಾಡು 1993
20. ಧುಮ್ಮಸ್ಸು 1994
21. ಏರಿಳಿತಗಳು 1995
22. ಆಸರೆಗಳು 1996
23. ನನ್ನ ಒಲವು ನಿನ್ನ ಚೆಲುವು 1997
24. ದಂಗೆ 1997
25. ಅಭಿಮಾನ 1998
26. ಬದುಕು 2001
27. ಕಾಗೆ ಮುಟ್ಟಿತು 2002

**ಕಥೆ**

1. ಜ್ವಲಂತ 1989
2. ಅವ್ವ ಮತ್ತು ಇತರ ಕಥೆಗಳು 1993
3. ಶ್ಯಾದಿಗಿ ಬನ್ ದಾಗ ಕತೆಯಾಗಿ ನಿಂತವರು 2006

**ಇತರೆ**

1. ದುರಗ ಮುರಗಿಯವರ ಸಂಸ್ಕೃತಿ 1993
(ಸಾಹಿತ್ಯ ಅಕಾಡೆಮಿ ಪ್ರಕಟಣೆ)
2. ಖೇಮಣ್ಣ 1998
(ಸಾಹಿತ್ಯ ಅಕಾಡೆಮಿ ಪ್ರಕಟಣೆ)

## ಪರಾಮರ್ಶನ ಗ್ರಂಥಗಳು

1. ಅರವಿಂದ ಮಾಲಗತ್ತಿ : ಸಾಹಿತ್ಯ ಸಂಸ್ಕೃತಿ ಮತ್ತು ದಲಿತ ಪ್ರಜ್ಞೆ, ಕನ್ನಡ ಸಾಹಿತ್ಯ ಪರಿಷತ್ 2003
2. ಅಕ್ಕಮಹಾದೇವಿ : ದಲಿತ ಮಹಿಳೆ, ಶ್ರೀಮತಿ ಯಶೋದಾ ರಾಗೌಟ್ರಸ್ಟ್ ಮೈಸೂರು. 2009
3. ಅರ್ಜುನ ಗೊಳಸಂಗಿ : ಕನ್ನಡ ದಲಿತ ಸಾಹಿತ್ಯ ಸಮಾಲೋಕನ, ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು. 2003
4. ಆಶಾದೇವಿ.ಎಂ.ಎಸ್. : ಸ್ತ್ರೀಮತ ವನುತ್ತರಿಸಲಾಗದೆ? ಅಕ್ಷರ ಪ್ರಕಾಶನ ಹೆಗ್ಗೋಡು ಸಾಗರ, 2006
5. ಇಂದಿರಾ.ಆರ್ : ಮಹಿಳೆ ಸಮಾಜ ಸಂಸ್ಕೃತಿ, ಪ್ರಸಾರಾಂಗ ಕ.ವಿ.ವಿ.ಹಂಪಿ, 2002
6. ಉಷಾ.ಎಂ : ಮಹಿಳೆ ಮತ್ತು ಜಾತಿ ಒಂದು ಸೈದ್ಧಾಂತಿಕ ಗ್ರಹಿಕೆ; ಪ್ರಸಾರಾಂಗ ಕ.ವಿ.ವಿ. ಹಂಪಿ,2005
7. ಉಷಾ.ಎಂ : ಆಧುನಿಕ ಮಹಿಳಾ ಸಾಹಿತ್ಯ ಇನ್ನಷ್ಟು ಪುಟಗಳು; ಪ್ರಸಾರಾಂಗ ಕ.ವಿ.ವಿ. ಹಂಪಿ, 2007
8. ಉಷಾ ವಿಜಯ ಮೊಳೆಯಾರ; ಶ್ರೀ ಕುವೆಂಪು ಸ್ತ್ರೀವಾದಿ ಚಿಂತನೆ, ಸಿವಿಜಿ ಪಬ್ಲಿಕೇಷನ್ಸ್ ಬೆಂಗಳೂರು, 2004
9. ಉಷಾ ಪಿ.ರೈ(ಸಂ) : ಲೇಖ–ಲೋಕ4, ಕರ್ನಾಟಕ ಲೇಖಕಿಯರ ಸಂಘ ಬೆಂಗಳೂರು, 2003
10. ಕವಿತಾ ರೈ, ಬಿ.ಆರ್: ಮಹಿಳೆ : ಅಸ್ತಿತ್ವದ ಸಂಕಥನ – ಒಂದು ಪರಿಕಲ್ಪನಾತ್ಮಕ ಅಧ್ಯಯನ, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು, 2005
11. ಗಾಯತ್ರಿ.ಎನ್ : ಗೀತಾನಾಗಭೂಷಣ, ನವಕರ್ನಾಟಕ ಸಾಹಿತ್ಯಸಂಪದ, 2009
12. ಗೀತಾಪ್ರಸಾದ್ : ಆಧುನಿಕ ಮಹಿಳಾ ಅಭಿವ್ಯಕ್ತಿ, ಧಾತ್ರಿ ಪುಸ್ತಕ ಬೆಂಗಳೂರು, 2009
13. ಗೀತಾ ನಾಗಭೂಷಣ : ದುರಗ ಮುರಗಿಯರ ಸಂಸ್ಕೃತಿ, ವಿದ್ಯಾನಿಧಿ ಪ್ರಕಾಶನ ಗದಗ, 2010
14. ಗುರುಪಾದ ಮರಿಗುದ್ದಿ: ಹರಿಹರನ ಲಿಂಗಭೇದ ನಿರಸನ ರಗಳೆಗಳು, ಪ್ರಸಾರಾಂಗ, ಕ.ವಿ.ವಿ ಹಂಪಿ, 2008

15. ತೇಜಸ್ವಿನಿ ನಿರಂಜನ, ಸೀಮಂತಿನಿ ನಿರಂಜನ(ಸಂ) : ಸ್ತ್ರೀವಾದಿ ಸಾಹಿತ್ಯ ವಿಮರ್ಶೆ, ಕ್ರೈಸ್ಟ್ ಕಾಲೇಜು, ಬೆಂಗಳೂರು, 1994
16. ನೇಮಿಚಂದ್ರ : ಮಹಿಳಾ ಅಧ್ಯಯನ, ಅಂಕಿತ ಪುಸ್ತಕ ಬಸವನಗುಡಿ, 2001
17. ಪ್ರಭಾ ಮಣಿ : ಮಹಿಳೆ ಮತ್ತು ಧರ್ಮ, ಕನ್ನಡ ಸಾಹಿತ್ಯ ಪರಿಷತ್, 2002
18. ಪ್ರೇಮಾಸಿರ್ಸೆ : ಮಹಿಳೆ, ಸಮಾಜ ಮತ್ತು ಸವಾಲುಗಳು, ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು, 2006
19. ಬಿದರಿ ಚಂದ್ರಕಲಾ : ಮಹಿಳಾಬದುಕು, ತನುಮನ ಪ್ರಕಾಶನ ಮೈಸೂರು, 2009
20. ಮೀರಾ.ಎಲ್.ಜಿ : ಸ್ತ್ರೀಸಂವೇದನೆಯಲ್ಲಿ ಕನ್ನಡ ಕಥನ, ಶಕ್ತಿ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್, ಬೆಂಗಳೂರು, 2004
21. ಮಂಗಳಾ ಪ್ರಿಯದರ್ಶಿನಿ.ಡಿ : ಆಧುನಿಕ ಕನ್ನಡ ಕಾವ್ಯದ ಸ್ವರೂಪ, ಪ್ರಸಾರಾಂಗ ಬೆಂ.ವಿ.ವಿ.2004
22. ಮೂರ್ತಿಶ್ವರಯ್ಯ ಬೆ.ಕಾ : ಮಹಿಳೆ ಸಮಾಜ ಮತ್ತು ಕಾನೂನು, ಸ್ವಪ್ನ ಬುಕ್ ಹೌಸ್, 2002
23. ಮಂಗಳಾ.ಚಿ.ನ : ಎಚ್ಚೆತ್ತ ಹಾದಿಯಲ್ಲಿ ಮಹಿಳೆ, ಪ್ರಸಾರಾಂಗ ಬೆಂ.ವಿ.ವಿ.,2001
24. ಮುಕ್ತಾಯಕ್ಕ ಎಚ್.ಎಸ್ : ಕನ್ನಡ ಸಾಹಿತ್ಯದಲ್ಲಿ ಸ್ತ್ರೀಸಂವೇದನೆ, ಕರ್ನಾಟಕ ಸಾಹಿತ್ಯ ಅಕಾಡೆಮೆ, ಬೆಂಗಳೂರು, 1997
25. ರಹಮತ್ ತರೀಕೆರೆ : ಸಾಂಸ್ಕೃತಿಕ ಅಧಯನ, ಕರ್ನಾಟಕ ಸಾಹಿತ್ಯ ಅಕಾಡೆಮಿ, 2008
26. ಲೀಲಾವತಿ.ಎಂ : ಮೂಢನಂಬಿಕೆ ಮತ್ತು ಮಹಿಳೆ, ಕನ್ನಡ ಸಾಹಿತ್ಯ ಪರಿಷತ್, 2000
27. ಲಕ್ಷ್ಮೀ ನಾರಾಯಣ ನಾಗವಾರ (ಪ್ರ.ಸಂ) : ಬಿ.ಬಸವಲಿಂಗಪ್ಪ ಮತ್ತು ಬೂಸಾ ಚಳುವಳಿಯ ಕಾಲುಶತಮಾನ, ಕರ್ನಾಟಕ ದಲಿತ ಸಂಘರ್ಷ ಸಮಿತಿ ಬೆಂಗಳೂರು, 2000
28. ವಿಜಯಾ ಸುಬ್ಬರಾಜ್ : ಅಕ್ಕಮಹಾದೇವಿಯ ವಚನಗಳಲ್ಲಿ ಪ್ರತಿಭಟನೆ ಮತ್ತು ಅನುಭಾವ, ಪ್ರಸಾರಾಂಗ, ಬೆಂ.ವಿ.ವಿ.2006
29. ಶಾಲಿನಿ ರಜನೀಶ್ : ನಡೆಮುಂದೆ ಮಹಿಳಾ ಸಬಲೀಕರಣಕ್ಕೆ ದಾರಿ, ಸ್ವಪ್ನ ಬುಕ್ ಹೌಸ್.2008
30. ಶ್ರೀಮತಿ.ಎಚ್.ಎಸ್ : ಮಹಿಳಾ ಅಧ್ಯಯನ, ಸಂ4, ಸಂಚಿಕೆ 1 ಪ್ರಕ: ವಿ.ವಿ.ಹಂಪಿ, 2002

31. ಶ್ರೀಮತಿ.ಎಚ್.ಎಸ್.ಶಿವಾನಂದ ಎಸ್ ವಿರಕ್ತಮಠ, ಕೃಷ್ಣ ಜೆ (ಸಂ) : ಮಹಿಳೆ ದುಡಿಮೆ ಮತ್ತು ಬಿಡುವು ಮಹಿಳಾ ಅಧ್ಯಯನಕೇಂದ್ರ ಕ.ವಿ.ವಿ. ಹಂಪಿ, 2007
32. ಶ್ರೀಮತಿ. ಎಚ್.ಎಸ್. : ಚಹರೆ, ಇಳಾ ಪ್ರಕಾಶನ ಬೆಂಗಳೂರು. 1999
33. ಶ್ರೀಮತಿ.ಎಚ್.ಎಸ್. : ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಪ್ರಸಾರಾಂಗ ಕ.ವಿ.ವಿ.ಹಂಪಿ, 2006
34. ಶ್ರೀಮತಿ.ಎಚ್.ಎಸ್, ಶಿವಾನಂದ ಎಸ್ ವಿರಕ್ತ ಮಠ ಮತ್ತು ಕೃಷ್ಣ.ಜೆ(ಸಂ): ಹೆಣ್ಣು ಮತ್ತು ಭಾಷೆ, ಮಹಿಳಾ ಅಧ್ಯಯನ ಕೇಂದ್ರ, ಕ.ವಿ.ವಿ.ಹಂಪಿ, 2007
35. ಶ್ರೀಮತಿ.ಎಚ್.ಎಸ್. : ಸಿಮೊನ್ ದ ಬೊವಾ ದಸೆಕೆಂಡ್ ಸೆಕ್ಸ್, ಅಧ್ಯಯನ ಮಂಡಲ ಬೆಂಗಳೂರು, 2007
36. ಶ್ರೀಮತಿ.ಎಚ್.ಎಸ್.: ಕನ್ನಡ ಮಹಿಳೆ ಮತ್ತು ಸ್ವಾತಂತ್ರ್ಯ ಹೋರಾಟ, ಪ್ರಸಾರಾಂಗ. ಕ.ವಿ.ವಿ.ಹಂಪಿ, 1999
37. ಶೈಲಜ ಹಿರೇಮಠ : ಸ್ತ್ರೀಕಥನ, ಭುವನ ಪ್ರಕಾಶನ ಹೊಸಪೇಟೆ ವಿದ್ಯಾರಣ್ಯ, 2003
38. ಷರೀಫಾ.ಕೆ, ಬಸವರಾಜ ಸೂಳೀಬಾವಿ(ಸಂ): ಮಹಿಳಾಮಾರ್ಗ, ಲಡಾಯಿ ಪ್ರಕಾಶನ ಗದಗ, 2010
39. ಸರಸ್ವತಿ ಚಿಮ್ಮಲಗಿ (ಸಂ) : ಗೀತಾನಾಗಭೂಷಣ ಕಲಬುರ್ಗಿಯ ಸ್ಪಂದನ, ಕರ್ನಾಟಕ ಸಾಹಿತ್ಯ ಅಕಾಡೆಮಿ, 2004
40. ಸುಮಿತ್ರಾಬಾಯಿ, ಬಿ.ಎನ್: ಸ್ತ್ರೀವಾದ, ಕರ್ನಾಟಕ ಸಾಹಿತ್ಯ ಅಕಾಡೆಮಿ, 2006
41. ಸುಜ್ಞಾನ ಮೂರ್ತಿ (ಅನು) : ನಮಗೆ ಗೋಡೆಗಳಿಲ್ಲ, ಲಡಾಯಿ ಪ್ರಕಾಶನ ಗದಗ, 2009
42. ಸಿಂಗಮ್ಮಾಳ್ ಎಂ.ಎ : ರಾಜಕಾರಣದಲ್ಲಿ ಮಹಿಳೆ, ಕನ್ನಡ ಸಾಹಿತ್ಯ ಪರಿಷತ್ತು, 2002
43. ಸಂಧ್ಯಾರೆಡ್ಡಿ.ಕೆ.ಆರ್. : ಕಂಡದ್ದು ಅನಿಸಿದ್ದು, ಸಮಯಾ ಪ್ರಕಾಶನ ಬೆಂಗಳೂರು, 2008
44. ಸುಮಿತ್ರಾ ಬಾಯಿ.ಬಿ.ಎನ್ : ಸರಹದ್ದುಗಳ ಆಚೆ-ಈಚೆ, ಇಳಾಪ್ರಕಾಶನ ಬೆಂಗಳೂರು, 2009
45. ಸಾವಿತ್ರಿ.ಕೆ : ನಂಬಿದ ಸತ್ಯಗಳು, ಮುದ್ಧಪ್ಪ ಸ್ಮಾರಕ ಟ್ರಸ್ಟ್-ಕೃಷ್ಣಾಪುರ ದೊಡ್ಡಿ, 2006
46. ಹಾಲತಿ ಸೋಮಶೇಖರ್ : ಸ್ತ್ರೀಪರ, ವಿಸ್ಮಯ ಪ್ರಕಾಶನ ಮೈಸೂರು 23, 2007
47. ಹಾಲತಿ ಸೋಮಶೇಖರ್ : ಮಹಿಳಾ ಚಳುವಳಿ, ಸಾಮಾಜಿಕ ಮತು ಸಾಂಸ್ಕೃತಿಕ ಹಿನ್ನೆಲೆ, ವಿಸ್ಮಯ ಪ್ರಕಾಶನ, ಮೈಸೂರು, 2007
48. ಕನ್ನಡ ಸಾಹಿತ್ಯದಲ್ಲಿ ಪ್ರಧಾನ ಮತ್ತು ಅಧೀನ ಸಂಸ್ಕೃತಿ : ವಿವಿಧ ಲೇಖಕರು, ಕನ್ನಡ ಸಾಹಿತ್ಯ ಅಕಾಡೆಮಿ, 1993
49. ಕನ್ನಡ ಸಾಹಿತ್ಯದಲ್ಲಿ ನೋವಿನ ನೆಲೆಗಳು : ವಿವಿಧ ಲೇಖಕರು, ಕನ್ನಡ ಸಾಹಿತ್ಯ ಅಕಾಡೆಮಿ. 1993
50. ಕನ್ನಡ ಸಾಹಿತ್ಯದಲ್ಲಿ ಸ್ತ್ರೀಸಂವೇಧನೆಯ ಸ್ವರೂಪ : ವಿವಿಧ ಲೇಖಕರು, ಕರ್ನಾಟಕ ಸಾಹಿತ್ಯ ಅಕಾಡೆಮಿ, 2006